# ಆಧುನಿಕ ಸಮಾಜದಲ್ಲಿ ವಯೋವೃದ್ಧರ ಸ್ಥಿತಿಗತಿಗಳು

## (ಯಾದಗಿರಿ ತಾಲೂಕನ್ನು ಅನುಲಕ್ಷಿಸಿ)

(ಸಮಾಜಶಾಸ್ತ್ರದಲ್ಲಿ ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸುತ್ತಿರುವ ಸಂಪ್ರಬಂಧ)


ಸಂಶೋಧನಾ ವಿದ್ಯಾರ್ಥಿ

ಸೋಮರಾಯ ಬೆನಕಪ್ಪ

ಮಾರ್ಗದರ್ಶಕರು

ಡಾ. ತಾರಿಹಳ್ಳಿ ಹನುಮಂತಪ್ಪ

ಅಧ್ಯಾಪಕರು

ಮಾನವಶಾಸ್ತ್ರ ಅಧ್ಯಯನ ವಿಭಾಗ



ಸಮಾಜ ವಿಜ್ಞಾನಗಳ ನಿಕಾಯ

ಮಾನವಶಾಸ್ತ್ರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೮-೦೯

756

# ಆಧುನಿಕ ಸಮಾಜದಲ್ಲಿ ವಯೋವೃದ್ಧರ ಸ್ಥಿತಿಗತಿಗಳು

## (ಯಾದಗಿರಿ ತಾಲೂಕನ್ನು ಅನುಲಕ್ಷಿಸಿ)

(ಸಮಾಜಶಾಸ್ತ್ರದಲ್ಲಿ ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸುತ್ತಿರುವ ಸಂಪ್ರಬಂಧದ )


ಸಂಶೋಧನಾ ವಿದ್ಯಾರ್ಥಿ

**ಸೋಮರಾಯ ಬೆನಕಪ್ಪ**





ಮಾರ್ಗದರ್ಶಕರು

ಡಾ. ತಾರಿಹಳ್ಳಿ ಹನುಮಂತಪ್ಪ

ಅಧ್ಯಾಪಕರು

ಮಾನವಶಾಸ್ತ್ರ ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ

ಮಾನವಶಾಸ್ತ್ರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

೨೦೦೮–೦೯

# ಸಂಶೋಧಕರ ಪ್ರಮಾಣ ಪತ್ರ

" ಅಧುನಿಕ ಸಮಾಜದಲ್ಲಿ ವಯೋವೃದ್ಧರ ಸ್ಥಿತಿಗತಿಳು" (ಯಾದಗಿರಿ ತಾಲ್ಲೂಕನ್ನು ಅನುಲಕ್ಷಿಸಿ) ಎಂಬ ಶಿರ್ಷಿಕೆಯ ಈ ಪ್ರಭಂದವನ್ನು ಸಮಾಜಶಾಸ್ತ್ರದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಡಾ.ತಾರಿಹಳ್ಳಿ ಹನುಮಂತಪ್ಪ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಪ್ರಭಂಧ ಅಥವ ಇದರ ಯಾವುದೇ ಭಾಗವನ್ನು ಯಾವ ಪದವಿಗಾಗಲಿ ಅಥವ ಯಾವುದೇ ಇತರ ಉದ್ದೇಶಗಳಿಗಾಗಿ ಬಳಸಿ ಕೊಂಡಿಲ್ಲ ಎಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ : 08.10.2009

ಸ್ಥಳ : ವಿದ್ಯಾರಣ್ಯ

(ಸೋಮರಾಯ ಬೆನಕಪ್ಪ)
ಸಂಶೋಧನಾ ವಿದ್ಯಾರ್ಥಿ
ಮಾನವಶಾಸ್ತ್ರ ಅಧ್ಯಾಯನ ವಿಭಾಗ
ಕನ್ನಡ ವಿಶ್ವ ವಿದ್ಯಾಲಯ ವಿದ್ಯಾರಣ್ಯ ಹಂಪಿ.

# ಮಾರ್ಗದರ್ಶಕರ ದೃಢಿಕರಣ ಪತ್ರ

ಶ್ರೀ ಸೋಮರಾಯ ಬೆನಕಪ್ಪ ಅವರು " ಆಧುನಿಕ ಸಮಾಜದಲ್ಲಿ ವಯೋವೃದ್ಧರ ಸ್ಥಿತಿಗತಿಗಳು " (ಯಾದಗಿರಿ ತಾಲ್ಲೂಕನ್ನು ಅನುಲಕ್ಷಿಸಿ) ಎಂಬ ಶಿರ್ಷಿಕೆಯ ಈ ಪ್ರಬಂಧವನ್ನು 2008–09ರ ಸಾಲಿನ ಸಮಾಜಶಾಸ್ತ್ರದ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಪ್ರಬಂಧದ ವಿಷಯವನ್ನು ಅಥವ ಇದರ ಯಾವುದೆ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢಿಕರಿಸುತ್ತೇನೆ.

ದಿನಾಂಕ : 08.10.2009

ಸ್ಥಳ : ವಿದ್ಯಾರಣ್ಯ

T. Hanumanthappa.

(ಡಾ॥ ತಾರಿಹಳ್ಳಿ ಹನುಮಂತಪ್ಪ)

ಮುಖ್ಯಸ್ಥರು ಮತ್ತು ಮಾರ್ಗದರ್ಶಕರು

ಮಾನವಶಾಸ್ತ್ರ ಅಧ್ಯಾಯನ ವಿಭಾಗ

ಕನ್ನಡ ವಿಶ್ವ ವಿದ್ಯಾಲಯ ವಿದ್ಯಾರಣ್ಯ, ಹಂಪಿ.

# ಕೃತಜ್ಞತೆಗಳು

"ಆಧುನಿಕ ಸಮಾಜದಲ್ಲಿ ವಯೋವೃದ್ಧರ ಸ್ಥಿತಿಗತಿಗಳು" (ಯಾದಗಿರಿ ತಾಲ್ಲೂಕನ್ನು ಅನುಲಕ್ಷಿಸಿ) ಎಂಬ ಸಂಶೋಧನೆ ನಿಬಂಧವನ್ನು ಕನ್ನಡ ವಿಶ್ವ ವಿದ್ಯಾಲಯಕ್ಕೆ ಎಂ.ಫೀಲ್ ಪದವಿಗಾಗಿ ಒಪ್ಪಿಸಲು ಅವಕಾಶ ಮಾಡಿಕೊಟ್ಟ ವಿಶ್ವ ವಿದ್ಯಾಲಯದ ಮಾನ್ಯ ಕುಲಪತಿಗಳಾದ ಡಾ॥ ಎ. ಮುರಿಗೆಪ್ಪ ಹಾಗೂ ಕುಲಸಚಿವರಾದ ಮಾನ್ಯ ಶ್ರೀ ಎಸ್. ಎಸ್. ಪೂಜಾರ್ ಅವರಿಗೂ ನನ್ನ ತುಂಬ ಹೃದಯದ ಕೃತಜ್ಞತೆಗಳು.

ಅಧ್ಯಾಯನದ ಕ್ರಮವನ್ನು ಬೋಧಿಸಿದ ಪ್ರತಿಯೊಂದು ಮಾರ್ಗದರ್ಶನ ಮಾಡಿದ ವಿಭಾಗದ ಮುಖ್ಯಸ್ಥರಾದ ಮತ್ತು ಮಾರ್ಗ ದರ್ಶಕರಾದ ಡಾ॥ ತಾರಿಹಳ್ಳಿ ಹನುಮಂತಪ್ಪ ಅವರಿಗೂ ಅಧ್ಯಾಯನದ ಅವಧಿಯಲ್ಲಿ ಕ್ರಮ ಬದ್ಧತೆಯನ್ನು ಪರಿಪಾಲಿಸುವಂತೆ ಸಲಹೆ ನೀಡಿದ ಡಾ. ಎಲ್. ಶ್ರೀನಿವಾಸ ರವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ.

ಪ್ರತಿ ಬಾರಿಯೂ ನನ್ನ ವಿದ್ಯಾಭ್ಯಾಸಕ್ಕೆ ಬೆನ್ನು ತಟ್ಟಿದ ಡಾ॥ ಮಲ್ಲಿಕಾರ್ಜುನ ವಣೇನೂರು ಅವರಿಗೂ ಪ್ರವಾಚಕರಾದ ಡಾ. ಎಸ್. ಎಸ್. ಅಂಗಡಿಯವರಿಗೂ ಮತ್ತು ಡಾ. ಮಂಜುನಾಥ ಬೇವಿನಕಟ್ಟಿ ಇವರಿಗೆ ಅನಂತ ಕೃತಜ್ಞತೆಗಳು. ನನ್ನ ಎಂ. ಫಿಲ್ ಪದವಿಗೆ ಸಲಹೆ ಸೂಚನೆ ನೀಡಿದ ಮೈಸೂರು ವಿಶ್ವ ವಿದ್ಯಾಲಯ ಪ್ರಾಧ್ಯಪಕರಾದ ಪ್ರೋ॥ ಎಚ್. ಕೆ. ಭಟ್ ಅವರಿಗೂ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಪ್ರೋ॥ ಮುರಾರಿ ನಾಯಕ್‌ರವರಿಗೂ ತುಂಬು ಹೃದಯದ ಕೃತಜ್ಞತೆಗಳು.

ನನ್ನ ಎಂ.ಫಿಲ್ ಅಧ್ಯಾಯನದಲ್ಲಿ ಸಹಕರಿಸಿದ ವಿಭಾಗದ ಸಿಬ್ಬಂಧಿಗಳಾದ ಶ್ರೀ ಪಂಪಾಪತಿಯವರಿಗೂ ಮತ್ತು ರಮೇಶರವರಿಗೂ ಹಾಗೂ ಇತರ ಸಿಬ್ಬಂಧಿಗಳಿಗೂ ಅನಂತ ಕೃತಜ್ಞತೆಗಳು. ಮತ್ತು ನನ್ನನ್ನು ಎಂ.ಫಿಲ್ ಪದವಿ ಮುಗಿಯವರೆಗೂ ನನಗೆ ಸದಾ ಸಹಕರಿಸುತ್ತಿದ್ದ ನನ್ನ ಅಣ್ಣನಾದ ನಾಗರೆಡ್ಡಿ. ಬೆ. ದೊಡ್ಡಮನಿ, ರೇಣುಕಾದೇವಿ.ನಾ. ದೊಡ್ಡಮನಿ.

ಪುಟಾಣಿಗಳಾದ ಅನಿಕೇತನ, ಅನನ್ಯ ಇವರುಗಳಿಗೆ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ.

ದೂರದಿಂದಲೇ ಎಂ.ಫಿಲ್ ಪದವಿಗೆ ಸಂಬಂಧಪಟ್ಟ ಸೂಕ್ತ ಸಲಹೆಗಳನ್ನು ವಿಸ್ತರಿಸುತ್ತಿದ್ದ ರಘುನಾಥರೆಡ್ಡಿ ಪಾಟೀಲ್ ಪ್ರಾಚಾರ್ಯರು ಚಂದ್ರಶೇಖರ ವಿದ್ಯಾ ಸಂಸ್ಥೆ ಯಾದಗಿರಿ ಇವರಿಗೂ ಹಾಗೂ ಧರ್ಮಪತ್ನಿಗೂ ವಂದನೆಗಳು ಹಾಗೂ ಹೊಸಮನೆ ಭೀಮರಾಯ ಇವರಿಗೆ ಕೃತಜ್ಞತೆಗಳು.

ಅಧ್ಯಾಯವನ್ನು ಪೂರ್ತಿಗೊಳಿಸಲು ಸ್ಫೂರ್ತಿ ತುಂಬಿರುವ ತಂಗಿಯರಾದ ಕುಮಾರಿ, ಅಕ್ಕನಾಗಮ್ಮ, ವಿಜಯಲಕ್ಷ್ಮಿ ತಮ್ಮನಾದ ಸದಾಶಿವ ಪಟೇದಾರ್ ಇವರಿಗೂ ಕೃತಜ್ಞತೆಗಳು. ಈ ನನ್ನ ಎಲ್ಲಾ ಕಾರ್ಯಗಳಿಗೆ ಮತ್ತು ಎಂ.ಫಿಲ್ ಪದವಿಯನ್ನು ಪೂರ್ತಿಗೊಳಿಸಲು ಸಹಕರಿಸಿದ ಗೆಳೆಯರ ಬಳಗವಾದ ಜೋಗಿನ ಕಟ್ಟಿ ವಿಠಲ್, ರಾಘವೇಂದ್ರ ಹಾಗಣಿಗೇರಾ, ಮುದಕಪ್ಪ ಕರೇಗೌಡ, ಮರೆಪ್ಪ, ಬಸವರಾಜ .ಎ.ಡಿ., ಅಂಬ್ರಿಶ ಆಲ್ಕೋಡ್, ಮುನಿರಾಜ್,

## ಪರಿವಿಡಿ

# ಅಧ್ಯಾಯ 1

## ಅಧ್ಯಾಯನದ ಉದ್ಧೇಶ, ವ್ಯಾಪ್ತಿ, ಮತ್ತು ಸ್ವರೂಪ

1.1. ಪ್ರಸ್ತಾವನೆ

1.2. ಅಧ್ಯಾಯನದ ಉದ್ಧೇಶ

1.3. ಅಧ್ಯಾಯನದ ವ್ಯಾಪ್ತಿ ಮತ್ತು ಸ್ವರೂಪ

1.4. ಅಧ್ಯಾಯನದ ವಿಧಾನಗಳು

1.5. ಅಧ್ಯಾಯನದ ಕ್ಷೇತ್ರ ಪರಿಚಯ

# ಆಧುನಿಕ ಸಮಾಜದಲ್ಲಿ ವಯೋವೃದ್ಧರ ಸ್ಥಿತಿಗತಿಗಳು
# (ಯಾದಗಿರಿ ತಾಲೂಕನ್ನು ಅನುಲಕ್ಷಿಸಿ)

## ಪ್ರಸ್ತಾವನೆ

ಜೀವನವಿಡೀ ಘನತೆ ಗೌರವಗಳೊಂದಿಗೆ ಬದುಕಿ ಕುಟುಂಬವನ್ನು ಕಟ್ಟಿ ಸಮಾಜಕ್ಕೆ ತಮ್ಮ ಕೊಡುಗೆಯನ್ನು ನೀಡಿದಂಥ ವ್ಯಕ್ತಿಗಳು ಮುಪ್ಪಾಗುತ್ತಿದ್ದಂತೆ ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ದೈಹಿಕವಾಗಿ ಪರಾವಲಂಬಿಗಳಾಗುವುದನ್ನು ಊಹಿಸುವುದು ಕಷ್ಟಕರವಾಗುತ್ತದೆ. ತಮ್ಮೆಲ್ಲ ಜವಾಬ್ದಾರಿಯನ್ನು ನಿಭಾಯಿಸಿ ಇದೀಗ ಸ್ವತಂತ್ರರಾಗಿ ಬಾಳಬೇಕಿದ್ದ ಮತ್ತು ಮಕ್ಕಳು, ಮೊಮ್ಮಕ್ಕಳು ಜೊತೆ ಹಾಯಾಗಿ ಜೀವನ ಕಳೆಯಬೇಕಾದ ವ್ಯಕ್ತಿ ಯಾರಿಗೂ ಬೇಡವಾಗಿ ಜೀವಿಸಬೇಕಾಗಿ ಬರುವುದು ವಿಧಿಯ ವಿಪರ್ಯಾಸವೇ ಸರಿ.

ಪಿಂಚಣಿ ಸೌಲಭ್ಯವನ್ನು ಆಧರಿಸಿದ ನೌಕರರು, ಸ್ಥಿತಿವಂತ ವೃದ್ಧರು ಮತ್ತು ಕೇವಲ ಕೆಲವೇ ಅಂಶಗಳಷ್ಟಿರುವ ಆರೋಗ್ಯ ಪೂರ್ಣ ವೃದ್ಧರು ಇವರುಗಳನ್ನು ಹೊರತುಪಡಿಸಿದರೆ ಉಳಿದ ಶೇ. ೬೦-೭೦ ಮಂದಿ ವೃದ್ಧರದು ಶೋಚನೀಯ ಸ್ಥಿತಿಯಾಗಿದೆ. ಹುಟ್ಟು ಅನಿರೀಕ್ಷಿತ ಸಾವು ನಿಶ್ಚಿತ ಎಂಬಂತೆ, ಮನುಷ್ಯ ಹುಟ್ಟಿದ ಮೇಲೆ ಎಂದಾದರೂ ಒಮ್ಮೆ ಸಾವನ್ನು ಕಂಡುಕೊಂಡು ಈ ಜಗದ ಜಂಜಾಟದಿಂದ ಮತ್ತು ಈ ಭೂಮಿಯ ಮೇಲಿನ ಎಲ್ಲಾ ಸಂಬಂಧಗಳನ್ನು ಕಳೆದುಕೊಳ್ಳುತ್ತಾನೆ.

ಮನುಷ್ಯ ಹುಟ್ಟಿದ್ದಾಗಲೇ ಮಗುವಿನಿಂದ ಹಲವು ಮಹತ್ವದ ಘಟ್ಟಗಳನ್ನು ದಾಟಬೇಕಾಗುತ್ತದೆ. ಬಾಲ್ಯ, ಪ್ರೌಢ, ಯೌವ್ವನ, ಮುಪ್ಪು. ಈ ನಾಲ್ಕು ಮಹತ್ವ ಘಟ್ಟಗಳಲ್ಲಿ ಮನುಷ್ಯ ವಯಸ್ಸಿಗೆ ಅನುಗುಣವಾಗಿ ಆಚಾರ-ವಿಚಾರಗಳು, ರೂಢಿ-ಸಂಪ್ರದಾಯಗಳನ್ನು ಮತ್ತು ಕೆಲವೊಂದು ಮಹತ್ವದ ಸಂಬಂಧವನ್ನು ರೂಪಿಸಿಕೊಳ್ಳಬೇಕಾಗುತ್ತದೆ.

ಬಾಲ್ಯ ಜೀವನದಲ್ಲಿ ೫ ರಿಂದ ೧೫ ವರ್ಷದೊಳಗಿನವರಾಗುತ್ತಾರೆ. ಪ್ರೌಢ ಜೀವನದಲ್ಲಿ ೧೬ ರಿಂದ ೧೭, ೨೦ ವರ್ಷದೊಳಗಿನವರಾಗುತ್ತಾರೆ. ಯೌವ್ವನ ಜೀವನದಲ್ಲಿ ೨೦ ರಿಂದ ೩೫ ವರ್ಷದೊಳಗಿನವರಾಗುತ್ತಾರೆ. ಮುಪ್ಪು ಅಥವಾ ವಯಸ್ಸಾಗುವಿಕೆ ೪೫ ರಿಂದ ಸಾಯುವವರೆಗೂ ವಯಸ್ಸಾಗುವಿಕೆ (ವೃದ್ಧಾಪ್ಯ) ವಯಸ್ಸಿನಲ್ಲಿ ಮನುಷ್ಯ ವಿಚಾರಗಳು ಬೇರೆ ಬೇರೆಯಾಗಿರುವುದಲ್ಲದೆ, ತಮ್ಮ ಹಿಂದಿನವರಿಗೆ ಮಾರ್ಗಸೂಚಿಕಗಳಾಗಿರುತ್ತಾರೆ. ಅವರು ತಮ್ಮ ಹಿಂದಿನ ವಯಸ್ಸಿನಲ್ಲಿ

ಮಾಡಿದ ಅನುಭವಗಳನ್ನು ಬೇರೊಬ್ಬರ ಜೊತೆಗೆ ಹಂಚಿಕೊಳ್ಳಲು ಬಯಸುತ್ತಾರೆ. ಮತ್ತು ಅವರು ಭಾರವಾದ, ಕಷ್ಟಕರವಾದ ಕೆಲಸಗಳನ್ನು ನಿರ್ವಹಿಸಲು ಅಸಮರ್ಥರಾಗಿರುತ್ತಾರೆ. ಅವರ ದೇಹದಲ್ಲಿ ಶಕ್ತಿ ಸಾಮರ್ಥ್ಯ ದಿನ ದಿನ ಕುಗ್ಗುತ್ತಾ ಹೋಗುತ್ತದೆ. ಇದರಿಂದ ಅವರು ಹಿರಿಯರು ಎನ್ನುವ ಭಾವನೆ ಅವರ ಹಿಂದಿನವರಿಗೆ ಅರಿವು ಮೂಡುತ್ತದೆ.

ಹಿರಿಯರು ಎಂದಾಕ್ಷಣ ಕಿರಿಯರಲ್ಲಿ ಗೌರವ ಮನೋಭಾವನೆ ಮೂಡುತ್ತದೆ. ವೃದ್ಧರ ರಕ್ಷಣೆ, ಪಾಲನೆ, ಪೋಷಣೆ ಅವರ ಆರೋಗ್ಯದ ರಕ್ಷಣೆ, ಅವರಿಗೆ ಸಾಮಾಜಿಕ ಭದ್ರತೆ ಮುಂತಾದವುಗಳು ಕಂಡುಕೊಳ್ಳುವುದು ಅಗತ್ಯವಾಗಿರುತ್ತದೆ. ಈ ವೃದ್ಯಾಪ್ಯವು ಕೇವಲ ಪುರುಷರಿಗೆ ಸೀಮಿತವಾಗಿರದೇ ಸ್ತ್ರೀಯರಲ್ಲಿ ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ವೃದ್ಧರ ಸಮಸ್ಯೆಯು ಒಂದು ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿ ಕೆಲವೊಂದು ವಿಶ್ವವಿದ್ಯಾಲಯ ಸ್ನಾತಕ ಪದವಿ ಪಠ್ಯಕ್ರಮದಲ್ಲಿ ವೃದ್ಧರ ಸಮಸ್ಯೆ ಎಂಬ ಪಠ್ಯವನ್ನು ಬೋಧನೆ ಮಾಡಲಾಗುತ್ತಿದ್ದು, ಈ ವೃದ್ಧರ ಸಮಸ್ಯೆಯು ಕೈಗಾರಿಕಾ ಕ್ರಾಂತಿ ನಂತರ ಬಹಳ ಮಟ್ಟಿಗೆ ಉಲ್ಬಣಗೊಂಡಿರುತ್ತದೆ.

ವ್ಯಕ್ತಿಗೆ ವಯಸ್ಸಾದಂತೆ ಶ್ರಮದ ಕೆಲಸ ಅಸಾಧ್ಯವಾಗುವುದು. ವೃದ್ಯಾಪ್ಯದಲ್ಲಿ ಕಿವುಡಿ, ಅರೆ ಕಿವುಡು, ದೃಷ್ಟಿದೋಷಗಳು, ಮಾನಸಿಕ ನೆಮ್ಮದಿ ಇಲ್ಲದಿರುವುದು, ವಿಮೋಚನಾ ಶಕ್ತಿ ಕ್ಷೀಣಿಸುವುದು, ಇವೇ ಮೊದಲಾದವು ದೈಹಿಕ ಹಾಗೂ ಮಾನಸಿಕ ಆರೋಗ್ಯಕ್ಕೆ ಸಂಬಂಧಿಸಿದಂತೆ ಗೋಚರವಾಗುವುದು. ಅಂತೆಯೇ ವೃದ್ಧರು ದುಡಿಯಲು ಸಾಧ್ಯವಿರುವುದಿಲ್ಲ. ವೃದ್ಧರನ್ನು ಪೋಷಿಸಿ ಆರೈಕೆಮಾಡಿ ರಕ್ಷಿಸಲು ಬೇರೆಯವರ ಅಗತ್ಯವಿರುತ್ತದೆ ವಯಸ್ಸಾದವರು ಸಮಾಜಕ್ಕೆ ಭಾರವಾದ ಹೊರೆಯಾದ ಮತ್ತು ಕುಟುಂಬಗಳಲ್ಲಿ ಅವರಿಗೆ ರಕ್ಷಣೆ ಇಲ್ಲದೆ ಕೆಲವು ಮಟ್ಟಿಗೆ ಬೇಡವಾದ ವ್ಯಕ್ತಿಗಳಾಗಿ ಕಂಡುಬರುತ್ತಿದ್ದು ಅಂತಹ ವೃದ್ಧರನ್ನು ಗುರುತಿಸಿ ಅವರಿಗೆ ಸಾಮಾಜಿಕ ಭದ್ರತೆ, ಆಶ್ರಯ, ವೈದ್ಯಕೀಯ ಸೌಲಭ್ಯ, ಆರ್ಥಿಕ ಸಹಾಯ, ವಸತಿ ಮುಂತಾದವುಗಳನ್ನು ಒದಗಿಸುವುದು ಅಗತ್ಯವಾಗಿರುತ್ತದೆ.

'ಭಾರತದ ಸಾಂಪ್ರದಾಯಿಕ ಸಮಾಜದಲ್ಲಿನ ಅವಿಭಕ್ತ ಕುಟುಂಬ ಪದ್ಧತಿಯಿಂದಾಗಿ ವೃದ್ಧರ ಸಮಸ್ಯೆಯು ಈ ಹಿಂದೆ ಜಟಿಲವಾದುದು ಎನಿಸಿರಲಿಲ್ಲ. ಆದರೆ ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ಅವಿಭಕ್ತ ಕುಟುಂಬಗಳು ತಮ್ಮ ಸ್ಥಾನವನ್ನು ಕಳೆದುಕೊಳ್ಳುತ್ತಿರುವುದರಿಂದ ವೃದ್ಧರ ಸಮಸ್ಯೆಗಳು ಜಟಿಲವಾಗುತ್ತವೆ. ಇದಕ್ಕೆ ಸಂಬಂಧಿಸಿದವರೆಲ್ಲಾ ಅಗತ್ಯ ಸುಧಾರಣೆಯನ್ನು ತರುವಲ್ಲಿ ತಕ್ಷಣ ಕಾರ್ಯ ಪ್ರವೃತ್ತರಾಗಿದಿದ್ದಲ್ಲಿ ಇದು ಇನ್ನೂ ಹೆಚ್ಚು ಜಟಿಲವಾದ ಸಂಭವವಿದೆ.[1]

'ಹಣದುಬ್ಬರ, ಹೆಚ್ಚುತ್ತಿರುವ ವೈದ್ಯಕೀಯ ವೆಚ್ಚ ಇತ್ಯಾದಿ ಕಾರಣದಿಂದ, ಅಪಘಾತಗಳಿಂದ ಅಂಗವಿಕಲರಾಗಿ ಶೀಘ್ರವಾಗಿ ತಮ್ಮ ಆದಾಯವನ್ನು ಕಳೆದುಕೊಳ್ಳುವ ವೃದ್ಧರಪಾಡೇನು? ಮತ್ತು ಅಸಂಘಟಿತ ವಲಯಗಳಲ್ಲಿ ವಿಶೇಷವಾಗಿ ಕೃಷಿಕೂಲಿಕಾರರ ಮತ್ತು ದಿನಗೂಲಿಗಳ ಪಾಡೇನು? ಮೊದಲೇ ತಿಳಿಸಿದಂತೆ ಸಾಮಾಜಿಕ, ಆರ್ಥಿಕ ಹಾಗೂ ಆರೋಗ್ಯದ ಭದ್ರತೆಗಳು ಅಸಂಘಟಿತ ವಲಯದ ಬಹುಸಂಖ್ಯಾತ ವೃದ್ಧರಿಗೆ ಇಲ್ಲ.

ಹೀಗಾಗಿ ಅಸಂಘಟಿತ ವಲಯಗಳ ವೃದ್ಧರಿಗೆ ಅನ್ವಯವಾಗುತ್ತಿದೆ. ಈ ವಲಯಗಳಲ್ಲಿ ತಮ್ಮ ಕುಟುಂಬ ಹಾಗೂ ಬಂಧು ವರ್ಗದಿಂದ ವಂಚಿತರಾದವರಿಗೂ ಆರ್ಥಿಕ ಸಾಮಾಜಿಕ ಮತ್ತು ಆರೋಗ್ಯ ಭದ್ರತೆಯು ಅಗತ್ಯವಾಗಿ ಆಗಬೇಕಾಗಿದೆ. ಸಂಘಟಿತ ವಲಯಗಳಲ್ಲಿ ನೌಕರಿಯಲ್ಲಿ ಇರುವವರಿಗೆ, ಭದ್ರತೆ ಕಾರ್ಯಕ್ರಮಗಳಾದ ಪಿಂಚಣಿ, ಇತ್ಯಾದಿ ಗಳಿಕೆಗಳು ಅವರು ಹೆಚ್ಚು ವೃದ್ಧರಾದಂತೆ ಸಾಕಾಗಿರಬಹುದು.[2]

'ಮಾನವನು ವೃದ್ಧಾಪ್ಯವನ್ನು ಬೆನ್ನಿಗಂಟಿಸಿಕೊಂಡೇ ಹುಟ್ಟುತ್ತಾನೆ. ಹೀಗಾಗಿ ವೃದ್ಧಾಪ್ಯ ಎಲ್ಲರಿಗೂ ಅನಿವಾರ್ಯ, ಎಲ್ಲರೂ ಧೀರ್ಘಕಾಲ ಬಾಳಲು ಇಚ್ಛಿಸುತ್ತಾರೆ. ವಿಪರಾಸ್ಯವೆಂದರೆ ಯಾರೂ ವೃದ್ಧಾಪ್ಯವನ್ನು ತಲುಪಲು, ವೃದ್ಧರೆಂದು ಗುರುತಿಸಿಕೊಳ್ಳಲು ಸ್ವಲ್ಪವೂ ಇಚ್ಛಿಸುವುದಿಲ್ಲ. ನಿಸರ್ಗ ನಿರ್ಮಿತ ಜೈವಿಕ ಪ್ರಕ್ರಿಯೆಯಾದ ವೃದ್ಧಾಪ್ಯವನ್ನು ಗುಣಪಡಿಸಲಾಗುವುದಿಲ್ಲವಾದರೂ, ಇದನ್ನು ರಕ್ಷಿಸಬಹುದು. ಆಯುಷ್ಯಕ್ಕೆ ಜೀವಕಳೆ ತುಂಬಬಹುದು. ಲಭ್ಯ ಸೌಲಭ್ಯಗಳಿಂದ ಬದುಕನ್ನು ಸಹನೀಯಗೊಳಿಸಬಹುದು. ಅರವತ್ತೈದು ವರ್ಷಗಳನ್ನು ಪೂರೈಸಿದ್ದವರನ್ನು ಹಿರಿಯ ವೃದ್ಧರು ಎನ್ನುತ್ತಾರೆ. ಮುಂದುವರೆದು ದೇಶಗಳಲ್ಲಿ

ಈಗ ವೃದ್ಧರ ಸಂಖ್ಯೆ ಹಾಗೂ ಸಮಸ್ಯೆಗಳು ಏರುಗತಿಯಲ್ಲಿ ಮುಂದುವರೆಯುತ್ತಿವೆ. ಭಾರತದಲ್ಲಿ ಈಗ ಜನಸಂಖ್ಯೆಯ ಶೇ.6.5.ರಿಂದ 8ರಷ್ಟು ವೃದ್ಧರು ಇದ್ದಾರೆ.[3]

'ಆದಾಯ ನಿಲ್ಲುವುದು, ಜೀವನಮಟ್ಟ ಕಡಿಮೆಯಾಗುವುದು, ದಿನಚರಿಯ ಬದಲಾವಣೆ, ಭವಿಷ್ಯದ ಅನಿರ್ದಿಷ್ಟತೆ, ಒಂಟಿತನ, ಸಂಗಾತಿಯ ಮರಣ, ಹೊಸ ಪೀಳಿಗೆಯೊಂದಿಗೆ, ಬದಲಾದ ಮೌಲ್ಯಗಳೊಂದಿಗೆ ಹೊಂದಿಕೊಳ್ಳಲಾಗದಿರುವುದು ಸೌಲಭ್ಯಗಳ ಕೊರತೆ, ಸಮಾಜದ ಕುಟುಂಬದವರ ಗೌರವ, ವಿಶ್ವಾಸ ಕಡಿಮೆಯಾಗುವುದು. ಜವಾಬ್ದಾರಿ ಕಡಿಮೆಯಾಗುವುದು, ಸ್ಥಾನಮಾನ, ಘನತೆ, ತಿರಸ್ಕಾರ ಮತ್ತಿತರ ಹತ್ತು ಹಲವು ಸಾಮಾಜಿಕ ಸಮಸ್ಯೆಗಳು ವಯೋವೃದ್ಧರನ್ನು ಕಾಡುತ್ತಿರುತ್ತವೆ.[4]

'ಪ್ರಾಚೀನ ಸಮಾಜದಲ್ಲಿ ಪ್ರತಿ ಕುಟುಂಬದವರು ಹಿರಿಯರನ್ನು ಅತ್ಯಂತ ಜಾಗರೂಕತೆಯಿಂದ ಮತ್ತು ಗೌರವಯುತವಾಗಿ ನೋಡಿಕೊಳ್ಳುವುದು ಶತಮಾನಗಳಿಂದಲೂ ನಡೆದುಬಂದಿದೆ. ವಿಶೇಷವಾಗಿ ಗ್ರಾಮೀಣ ಪ್ರದೇಶದ ಅಸಂಘಟಿತ ವಲಯಗಳಲ್ಲಿ ದುಡಿಯುತ್ತಿರುವ ಕುಟುಂಬದ ಸದಸ್ಯರಿಗೆ ವೈಯಕ್ತಿಕ ಆದಾಯವಾಗಲಿ ಅಥವಾ ಉಳಿತಾಯವಾಗಲಿ ನಿರ್ದಿಷ್ಟವಾಗಿ ಇರುವುದಿಲ್ಲ. ಕುಟುಂಬದ

ಒಟ್ಟು ಸಂಪತ್ತನ್ನು ಕುಟುಂಬದ ಎಲ್ಲಾ ಸದಸ್ಯರ ಅಭಿವೃದ್ಧಿಗಾಗಿ ಬಳಸಲಾಗುತ್ತಿತ್ತು. ಅಲ್ಲದೇ ಕುಟುಂಬದಲ್ಲಿ ಇರುವ ಹಿರಿಯರನ್ನು ಹಾಗೂ ಇತರ ಅವಲಂಬಿತರವನ್ನು ಪೋಷಣೆ ಮಾಡಲಾಗುತ್ತಿತ್ತು. ಔಪಚಾರಿಕವಾಗಿ ಮತ್ತು ಅನೌಪಚಾರಿಕವಾಗಿ, ಕಥೆ, ಪುರಾಣಗಳ ಮೂಲಕ ಹೊಸ ತಲೆಮಾರಿನ ಜನರಿಗೆ ಹೇಳಿ ಅವರನ್ನು ಪಕ್ವಗೊಳಿಸಲಾಗುತ್ತಿತ್ತು. ಈ ಎಲ್ಲಾ ಅಂಶಗಳಿಂದ ಹಿರಿಯರಿಗೆ ಭರವಸೆಯ ಬೆಂಬಲಗಳು ಹಿಂದಿನ ಸಮಾಜದಲ್ಲಿ ದೊರಕುತ್ತಿದ್ದವು.[5] ಹಿರಿಯರಿಗೆ ನ್ಯಾಯ ಸಮ್ಮತವಾದ ಗೌರವ ಮತ್ತು ಅಧಿಕಾರ ಕುಟುಂಬ ಹಾಗೂ ಸಮುದಾಯಗಳಿಂದ ಸಿಗುತ್ತಿದ್ದಕ್ಕೆ ಕಾರಣಗಳು ಹಲವಾರು.

'ಇತ್ತೀಚಿನ ದಿನಗಳಲ್ಲಿ ವೃದ್ಧರು, ವೃದ್ಧರು, ವೃದ್ಧಾಪ್ಯ, ವೃದ್ಧರ ಸಮಸ್ಯೆ, ವೃದ್ಧಾಶ್ರಮ, ವೃದ್ಧರ ಕಲ್ಯಾಣ, ಮುಂತಾದ ಅನೇಕ ಹೊಸ ಹೊಸ ಶಬ್ದಗಳು ಪ್ರಚಾರಕ್ಕೆ, ಬಳಕೆಗೆ ಬಂದಿವೆ. ಮತ್ತು ಈ ವಿಷಯಗಳ ಮೇಲೆ ಚರ್ಚೆ, ಚಿಂತನೆ, ಹೆಚ್ಚಾಗಿ ಕಂಡುಬರುತ್ತವೆ. ಇದಕ್ಕೆ ಕಾರಣ

ಇಲ್ಲದಿಲ್ಲ. ಇಂದು ಯಾವುದೇ ಆರ್ಥಿಕವಾಗಿ ಮುಂದುವರೆದ ರಾಷ್ಟ್ರದ ಜನಸಂಖ್ಯೆಯನ್ನು ತೆಗೆದುಕೊಂಡರೂ ಅದರಲ್ಲಿ ವೃದ್ಧರ ಸಂಖ್ಯೆ ಗಣನೀಯವಾಗಿರುವುದರ ಜೊತೆಗೆ ಅಲ್ಲಿಯ ಜನಸಾಮಾನ್ಯರಲ್ಲಿ ಆರೋಗ್ಯ, ನೈರ್ಮಲ್ಯ, ಆಹಾರ, ವ್ಯಾಯಾಮ ಇವುಗಳ ಬಗೆಗೆ ತಿಳುವಳಿಕೆ ಹೆಚ್ಚಾಗಿ ಅಕಾಲ ಮೃತ್ಯು ಹೊಂದುವವರ ಸಂಖ್ಯೆ ಕಡಿಮೆಯಾಗಿ, ವೃದ್ಧರ ಸಂಖ್ಯೆ ಹೆಚ್ಚುತ್ತಿದೆ. ಅಭಿವೃದ್ಧಿ ಹೊಂದುತ್ತಿರುವ ಭಾರತ ದೇಶದಲ್ಲಿ ಕೂಡ ನಾವು ಇಂತಹ ಇಂತಹ ಸ್ಥಿತಿ ಕಾಣಬಹುದು. ಮತ್ತು ಇದನ್ನು 1971, 1981 ಮತ್ತು 1991ರ ಜನಗಣತಿಯಿಂದ ಪುಷ್ಟೀಕರಿಸಬಹುದು. 1991ರ ಜನಗಣತಿಯ ಪ್ರಕಾರ ಭಾರತದ ಜನಸಂಖ್ಯೆಯಲ್ಲಿ ಪ್ರತಿಶತ 6ರಷ್ಟು ವೃದ್ಧರಿದ್ದಾರೆ. ಅಂದರೆ ವಯಸ್ಸಿನಲ್ಲಿ 60 ವರ್ಷಕ್ಕಿಂತ ಹೆಚ್ಚಿನವರಿದ್ದಾರೆ.[6]

**ಅಧ್ಯಾಯನದ ಉದ್ದೇಶ:**

ಸಂಶೋಧಕನು ಯಾವುದೇ ವಿಷಯದ ಪ್ರಬಂಧ ಮಂಡನೆ ಮಾಡಬೇಕಾದರೆ ಪ್ರಬಂಧದ ವಿಷಯದ ಪೂರ್ವಜ್ಞಾನ ಮತ್ತು ಉದ್ದೇಶವನ್ನು ಹೊಂದಿರಲೇಬೇಕಾದ ಪ್ರವೃತ್ತಿಯಾಗಿದೆ. ನನ್ನ ಪ್ರಬಂಧವಾದ "ಆಧುನಿಕ ಸಮಾಜದಲ್ಲಿ ವಯೋವೃದ್ಧರ ಸ್ಥಿತಿಗತಿ" (ಯಾದಗಿರಿ ತಾಲೂಕನ್ನು ಅನುಲಕ್ಷಿಸಿ) ಅಧ್ಯಯನದ ಉದ್ದೇಶ ಪುರಾತನ ಕಾಲದಿಂದ ವಯೋವೃದ್ಧರಲ್ಲಿ ಇರುವರ ನಂಬಿಕೆ (ಆಧುನಿಕ ಸಮಾಜದಲ್ಲಿ) ಮತ್ತು ಹಿರಿಯರು ಎನ್ನುವ ಗೌರವ ಮನೋಭಾವನೆ ಇಂದು ಆಧುನಿಕ ಸಮಾಜದಲ್ಲಿ ಮತ್ತು ಕೆಲವೊಂದು ಕುಟುಂಬಗಳಲ್ಲಿ ವೈಯಕ್ತಿಕ ಆಸೆ-ಆಕಾಂಕ್ಷೆಗಳಿಗೆ ಮತ್ತು ಸ್ವಾರ್ಥ ಮನೋಭಾವನೆಗೆ ಒಳಗಾಗಿ ಹೆತ್ತ ಮಕ್ಕಳೇ ಸ್ವತಃ ತಂದೆ- ತಾಯಿಗಳನ್ನು ದೂರ ಇಡುವುದು ಮತ್ತು ಅವರನ್ನು ಮನೆಯಿಂದ, ಕುಟುಂಬದಿಂದ ದೂರವಿಡುವುದು ಸತ್ಯಸಂಗತಿಯಾಗಿರುವುದು ಕಂಡುಬರುತ್ತದೆ.

ಕೆಲವೊಂದು ವ್ಯಕ್ತಿಗಳು ಸರಕಾರಿ ಇಲಾಖೆಗಳಲ್ಲಿ ಸೇವೆ ಸಲ್ಲಿಸಿ ತನ್ನ ಸೇವೆಯು ಸರಕಾರಿ ನಿಯಮಾವಳಿಯ ಪ್ರಕಾರ ೫೮ನೇ ವಯಸ್ಸಿಗೆ ಅಥವಾ ೬೦ನೇ ವಯಸ್ಸಿಗೆ ಸರಕಾರಿ ಸೇವೆಯಿಂದ ನಿವೃತ್ತಿಯಾದ ವಯೋವೃದ್ಧರ ಸ್ಥಿತಿ-ಗತಿಯು, ಬಡಕುಟುಂಬದಲ್ಲಿ ಜೀವನ ಕಳೆಯುವ ವಯೋವೃದ್ಧರ ಸ್ಥಿತಿ-ಗತಿಗಳು ಒಂದಕ್ಕೊಂದು ವಿಭಿನ್ನವಾಗಿರುತ್ತದೆ. ಸರಕಾರಿ ಸೇವೆಯಿಂದ ನಿವೃತ್ತಿಯಾದ ವೃದ್ಧರಿಗೆ ಸರಕಾರಿ ನಿಯಮಾವಳಿಯ ಪ್ರಕಾರ ನಿವೃತ್ತಿ ವೇತನ

(ಪಿಂಚಣಿ) ಪಡೆಯುವ ಮೂಲಕ ಅವರ ಜೀವನದ ಸ್ಥಿತಿಗತಿ ಬೇರೆಯಾಗಿರುತ್ತದೆ. ಅವರ ಜೀವನದ ಕೊನೆಯ ಉಸಿರು ಇರುವತನಕ ನಿವೃತ್ತಿ ವೇತನ ಪಡೆಯುವುದರಿಂದ ಅವನ ಜೀವನಕ್ಕೆ ಆರ್ಥಿಕ ಭದ್ರತೆಗೆ ಧಕ್ಕೆ ಬರುವುದಿಲ್ಲ. ಅವರು ಮಕ್ಕಳು, ಮೊಮ್ಮಕ್ಕಳ ಮತ್ತು ಪರರ ಸಮಾಜದ ಯಾವುದೇ ಸಂಘ-ಸಂಸ್ಥೆಗಳನ್ನು ಅವಲಂಭಿತರಾಗಿರದೇ ಸ್ವತಃ ತಮ್ಮ ಆರ್ಥಿಕ ಭದ್ರತೆ, ಸಾಮಾಜಿಕ ಭದ್ರತೆ ಮತ್ತು ಆರೋಗ್ಯದ ಸಂರಕ್ಷಣೆಯನ್ನು ನೋಡಿಕೊಂಡು ಮತ್ತು ಕಾಪಾಡಿಕೊಂಡು ಹೋಗುವಂತರಾಗಿರುತ್ತಾರೆ. ಆದರೆ ಮಕ್ಕಳ-ಮೊಮ್ಮಕ್ಕಳ ಮತ್ತು ಪರರ ಅವಲಂಭಿತರಾಗಿರುವ ಗ್ರಾಮೀಣ ಕುಟುಂಬಗಳಲ್ಲಿ ವೃದ್ಧರ ಸ್ಥಿತಿಗತಿ ಶೋಚನೀಯವಾಗಿರುವುದು ಆಧುನಿಕ ಸಮಾಜದಲ್ಲಿ ಅದರಲ್ಲಿ ಯಾದಗಿರಿ ತಾಲೂಕಿನ ಕೆಲವೊಂದು ಗ್ರಾಮೀಣ ಪ್ರದೇಶದಲ್ಲಿ ಕಂಡುಬರುತ್ತದೆ. ಕುಟುಂಬದಲ್ಲಿ ವೈಯಕ್ತಿಕ ಆಸೆಗಾಗಿ, ಸ್ವಾರ್ಥ ಮನೋಭಾವನೆಗಾಗಿ ಹೆತ್ತ ಮಕ್ಕಳೇ ತಂದೆ-ತಾಯಿಂದರನ್ನು ಕುಟುಂಬದಿಂದ ಹೊರದೂಡಲ್ಪಟ್ಟಿರುವ ಪ್ರಸಂಗವನ್ನು ಕಣ್ಣಾರೆ ಕಂಡ ದೃಶ್ಯಗಳಾಗಿರುತ್ತದೆ. (ಅಂತಹ ವೃದ್ಧರ ಸ್ಥಿತಿ-ಗತಿಗಳನ್ನು ಅವಲೋಕಿಸಿ ಮತ್ತು ಸಮಾಜದಿಂದ) ಅಂತಹವರು ಕುಟುಂಬದ ಸದಸ್ಯರಿಂದ ಮತ್ತು ಮಕ್ಕಳ ರಕ್ಷಣೆಯಿಂದ ಸಮಾಜಕ್ಕೆ ಬೇಡವಾಗಿರುವ ವೃದ್ಧರು ಇಂದೂ ಮಾರಕ ರೋಗಗಳಿಗೆ ತುತ್ತಾಗಿ ಮರಣ ಹೊಂದುತ್ತಿರುವುದು ಮತ್ತು ಕೆಲವೊಂದು ಸಾರ್ವಜನಿಕ ಸ್ಥಳಗಳಾದ ಬಸ್‌ನಿಲ್ದಾಣ, ರೇಲ್ವೆ ನಿಲ್ದಾಣ, ಊರಿನ ಸಂತೆಗಳಲ್ಲಿ ತಮ್ಮ ಜೀವನವನ್ನು ಮುಂದುವರಿಸಿಕೊಂಡು ಹೋಗುವುದಕ್ಕೆ ಮತ್ತು ಇತರರಿಗೆ ಭಾರವಾಗಿರದೆ ಭಿಕ್ಷಾಟಣೆಯಲ್ಲಿ ತೊಡಗಿಕೊಂಡಿದ್ದಾರೆ. ವಾಸಮಾಡುವುದಕ್ಕೆ ವಸತಿ ಸೌಲಭ್ಯವಿಲ್ಲದೆ, ಆರ್ಥಿಕವಾಗಿ ಹಿಂಬಿಳುವಿಕೆಯಿಂದ, ಆರೋಗ್ಯ ಸಂರಕ್ಷಣೆಯ ಅರಿವೇ ಇಲ್ಲದೇ, ಸಾಮಾಜಿಕ ಭದ್ರತೆಯಿಂದ ವಂಚಿತರಾಗಿ ಅನೇಕ ರೋಗರುಜಿನಗಳಿಗೆ ಬಲಿಯಾಗಿ, ಕೆಲವೊಂದು ರಸ್ತೆ ಅಪಘಾತದಲ್ಲಿ ಮರಣ ಹೊಂದಿ ಅಥವಾ ತಮ್ಮ ಶರೀರದ ಯಾವುದಾದರೊಂದು ಅಂಗಗಳನ್ನು ಕಳೆದುಕೊಂಡು ತಮ್ಮ ಜೀವನ ನಿರ್ವಹಣೆಗೆ ಬಿಕ್ಷಾಟನೆಯಲ್ಲಿ ತೊಡಗಿರುವುದು ಅಪ್ಪಟ ಸತ್ಯವಾಗಿರುವ ವಿಷಯವಾಗಿರುತ್ತದೆ. ಇಂತಹ ಶೋಚನೀಯ ಸ್ಥಿತಿ-ಗತಿಯಲ್ಲಿ ಜೀವನವನ್ನು ಸಾಗಿಸುವಂತ ವೃದ್ಧರನ್ನು ಗುರುತಿಸಿ, ಅವರಿಗೆ ಮೂಲಭೂತ ಸೌಕರ್ಯ ಒದಗಿಸುವುದೇ ನನ್ನ ಪ್ರಬಂಧದ ಪ್ರಮುಖ ಉದ್ದೇಶವಾಗಿರುತ್ತದೆ.

**ವಯೋವೃದ್ಧರಿಗಾಗಿ ಕೆಲವೊಂದು ಮೂಲಭೂತ ಸೌಕರ್ಯಗಳು, ಸೌಲಭ್ಯಗಳು ಮತ್ತು ಉದ್ದೇಶ:**

* ಸಾಮಾಜಿಕ ಭದ್ರತೆಯನ್ನು ಒದಗಿಸುವ ಉದ್ದೇಶ.
* ಆರ್ಥಿಕ ಸಹಾಯ, ಒದಗಿಸುವ ಉದ್ದೇಶ ಮತ್ತು ಆರ್ಥಿಕವಾಗಿ ವೃದ್ಧರನ್ನು ಬಲಪಡಿಸುವುದು.
* ಸ್ವಯಂ ಉದ್ಯೋಗಕ್ಕೆ ತರಬೇತಿ.
* ವಸತಿ ಸಂರಕ್ಷಣೆಯ ಅರಿವು ಮೂಡಿಸುವುದು.
* ಏಕಾಂಗಿತನದಿಂದ ಮುಕ್ತಿ.
* ಕೀಳು ಎನ್ನುವ ಮನೋಭಾವನೆ ಹೋಗಲಾಡಿಸುವುದು.
* ಅಲೆಮಾರಿತನದಿಂದ ಬಿಡುಗಡೆ.
* ವೃದ್ಧಾಶ್ರಮಗಳ ಸ್ಥಾಪನೆ.
* ಕುಟುಂಬದ ಸದಸ್ಯರೊಂದಿಗೆ ಕೂಡಿ ಬದುಕುವ ಆಸೆ ಈಡೇರಿಸುವಿಕೆ.
* ಸಂಧ್ಯಾ ಸುರಕ್ಷತೆ ಯೋಜನೆಯನ್ನು ಬಲಪಡಿಸುವುದು.
* ಸಮಾಜದಲ್ಲಿ ಗೌರವ ಸ್ಥಾನಮಾನ ದೊರಕಿಸುವುದು.
* ಮಾನಸಿಕ ನೆಮ್ಮದಿ ನೀಡುವುದು.
* ಸಂಘ-ಸಂಸ್ಥೆಗಳಿಂದ ಸಹಕಾರ ಮತ್ತು ಸಹಾಯ ಒದಗಿಸುವುದು.
* ಸಾಮಾಜಿಕ ನ್ಯಾಯ ಒದಗಿಸುವುದು.

ಈ ಮೇಲಿನ ಎಲ್ಲಾ ಅಂಶಗಳಿಂದ ವೃದ್ಧರಲ್ಲಿ ಇನ್ನೂ ಹೆಚ್ಚಿನ ದಿನಗಳಲ್ಲಿ ಜೀವಿಸುವ ಬಯಕೆಯನ್ನು ಚಿಗುರಿಸಬಹುದಾಗಿರುತ್ತದೆ. ಇದಕ್ಕೆ ಮಾರ್ಗದರ್ಶಕರ ಸಹಕಾರ, ಮಾರ್ಗ ಮತ್ತು ಸಮಸ್ತ ಯಾದಗಿರಿ ತಾಲ್ಲೂಕಿನ ಜನರ ಪ್ರೋತ್ಸಾಹ ಅಗತ್ಯವಾಗಿರುತ್ತದೆ.

**ಅಧ್ಯಯನದ ವ್ಯಾಪ್ತಿ:**

ಇತ್ತೀಚಿನ ದಿನಗಳಲ್ಲಿ ವೃದ್ಧರ ಸಂಖ್ಯೆಯ ಗಣನೀಯವಾಗಿ ಹೆಚ್ಚುತ್ತಿರುವುದು ಕಂಡುಬರುತ್ತದೆ.

ಇದರಲ್ಲಿ ಸ್ತ್ರೀಪುರುಷರೆಂಬ ಭೇದವಿಲ್ಲದೆ ಮತ್ತು ಜಾತಿಮತ ಎಂಬ ಭೇದವಿಲ್ಲದೆ ಸರ್ವಾರಿಶಿಯಾಕ್ಷಿ ವೃದ್ಧರು ಎಲ್ಲ ಜಾತಿಯಲ್ಲಿ ಕಂಡುಬರುತ್ತಾರೆ. ಕೆಲವೊಂದು ಕುಟುಂಬದಲ್ಲಿ ವೃದ್ಧರ ಸಂರಕ್ಷಣೆ ಉತ್ತಮವಾಗಿದ್ದರೂ ಕೆಲವೊಂದು ಕುಟುಂಬಗಳು ಆರ್ಥಿಕವಾಗಿ ಹಿಂದುಳುವಿಕೆಯಿಂದ ಕಡುಬಡುವರಾಗಿರುವುದರಿಂದ ತಂದೆ-ತಾಯಿಗಳೇ ಸ್ವಯಂ ಪ್ರೇರಿತರಾಗಿ ಕುಟುಂಬದಿಂದ ಮಕ್ಕಳ ಪ್ರೀತಿ-ವಾತ್ಸಲ್ಯದಿಂದ ಮೊಮ್ಮಕ್ಕಳ ಆರೈಕೆಯಿಂದ ದೂರಸರಿದು ತಮ್ಮ ನಿತ್ಯ ಜೀವನದ ನಿರ್ವಹಣೆಗಾಗಿ ಭಿಕ್ಷಾಟನೆ ಮಾಡುತ್ತಿರುವುದು ಸತ್ಯ. ನನ್ನ ಪ್ರಬಂಧ ಸಂಶೋಧನೆಗೆ ಯಾದಗಿರಿ ತಾಲೂಕನ್ನು ವ್ಯಾಪ್ತಿಯಾಗಿ ಆಯ್ಕೆ ಮಾಡಿಕೊಂಡಿರುತ್ತದೆ. ಈ ಯಾದಗಿರಿ ತಾಲೂಕಿನಲ್ಲಿ ಇತ್ತೀಚಿನ ದಿನಗಳಲ್ಲಿ ವೃದ್ಧರು ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿದೆ. ತಾಲೂಕುನಾದದ್ಯಾಂತ ಇವರು ಸಾಮಾಜಿಕ ಪಿಡುಗಾಗಿದ್ದಾರೆ. ಈ ಮೂಲಕ ಪ್ರದೇಶವನ್ನು ಆಯ್ಕೆಮಾಡಿಕೊಂಡು ಕುಟುಂಬದ ಮಕ್ಕಳ ಪ್ರೀತಿ, ಆರೈಕೆಯಿಂದ ವಂಚಿತರಾದ ವೃದ್ಧರಿಗೆ ಸಾಮಾಜಿಕ ನ್ಯಾಯ ಒದಗಿಸುವ ಉದ್ದೇಶ ಮತ್ತು ಆರ್ಥಿಕ ಭದ್ರತೆ ಒದಗಿಸುವ ಸವಿವರವಾಗಿ ನನ್ನ ಪ್ರಬಂಧದ ಸಂಶೋಧನೆಗೆ ಯಾದಗಿರಿ ತಾಲೂಕನ್ನು ಕ್ಷೇತ್ರಕಾರ್ಯಕ್ಕೆ ಆಯ್ಕೆಮಾಡಿಕೊಂಡಿರುತ್ತೇನೆ.

ಯಾದಗಿರಿ ತಾಲೂಕು ಪ್ರಾಚೀನ ಭಾರತದ ಅಥವಾ ಇತಿಹಾಸಕ್ಕೆ ಸಂಬಂಧಿಸಿದ ಒಂದು ಬೃಹತ್ ನಗರವಾಗಿರುತ್ತದೆ. ಇದು ಭೀಮನದಿಯ ದಡದಲ್ಲಿರುವ ನಗರವಾಗಿದ್ದು ಇದು ರೇಲ್ವೆ ಸೌಲಭ್ಯವನ್ನು ಪಡೆದು ಬಸ್ ಸಂಚಾರ ವ್ಯವಸ್ಥೆಯನ್ನು ತನ್ನದಾಗಿಸಿಕೊಂಡು ನೆರೆ ರಾಜ್ಯವಾಗಿರುವ ಆಂದ್ರಪ್ರದೇಶಕ್ಕೆ ಹೊಂದಿಕೊಂಡಿರುತ್ತದೆ.

ಇಲ್ಲಿ ಕೆಲವೊಂದು ಭಾಷೆಗಳು, ಕನ್ನಡ, ಹಿಂದಿ, ತೆಲುಗು ಪ್ರಮುಖ ಭಾಷೆಗಳಾಗಿರುತ್ತವೆ. ಇಲ್ಲಿ ಎಲ್ಲಾ ಜಾತಿಯ ಮತ್ತು ಎಲ್ಲಾ ಧರ್ಮದ ಜನರು ವಾಸವಾಗಿದ್ದು, ಇಲ್ಲಿನ ವಾಸ್ತುಶಿಲ್ಪಕ್ಕೆ ಹೆಸರುವಾಸಿಯಾಗಿರುವ ನಗರವಾಗಿದೆ.

ಯಾದಗಿರಿ ನಗರವು ತನ್ನ ವ್ಯಾಪ್ತಿಯಲ್ಲಿ ೧೦೦ಕ್ಕಿಂತ ಹೆಚ್ಚು ಹಳ್ಳಿಗಳನ್ನು ಒಳಗೊಂಡಿದ್ದು, ಪ್ರತಿಯೊಂದು ಹಳ್ಳಿಗಳು ಬೆಳೆಯಿಂದ ಸಮೃದ್ಧಿಯನ್ನು ಹೊಂದಿದ್ದು, ಜನರು ಆರ್ಥಿಕವಾಗಿ ಪ್ರಬಲ ಸಾಧಿಸಿದರು. ಗ್ರಾಮೀಣ ಪ್ರದೇಶದಲ್ಲಿ ಶೈಕ್ಷಣಿಕವಾಗಿ ಸ್ವಲ್ಪ ಪ್ರಮಾಣದಲ್ಲಿ ಕುಂಠಿತರಾಗಿದ್ದಾರೆ.

**ಅಧ್ಯಯನದ ಸ್ವರೂಪ:**

ವಯಸ್ಸಾದವರ ಸಮಸ್ಯೆಗಳು ಇಂದೂ ಹಿಂದೆಂದಿಗಿಂತಲೂ ಹೆಚ್ಚು ಗಮನ ಸೆಳೆಯುತ್ತಿರುವ ಸಾಮಾಜಿಕ ಸಮಸ್ಯೆಯಾಗಿರುವುದು ಈ ಸಮಸ್ಯೆಯು ಸಾರ್ವತ್ರಿಕ ಸಮಸ್ಯೆಯಾಗಿರುವುದಲ್ಲದೆ, ಇದು ಸ್ತ್ರೀಪುರುಷರೆಂಬ ಭೇದವಿಲ್ಲದೆ, ಪ್ರತಿಯೊಬ್ಬ ಸ್ತ್ರೀ-ಪುರುಷರ ಜೀವನದಲ್ಲಿ ಬರುವ ಕೊನೆಯ ಹಂತವಾಗಿರುತ್ತದೆ. ಪ್ರತಿಯೊಂದು ಹಂತದಲ್ಲಿ ಸ್ತ್ರೀ-ಪುರುಷರು ವಯಸ್ಸಿನ ಗುಣಕ್ಕೆ ತಕ್ಕಂತೆ ಕಾರ್ಯಗಳನ್ನು ನಿರ್ವಹಿಸಬೇಕಾಗಿರುತ್ತದೆ. ಆದರೆ ವಯಸ್ಸಿನಲ್ಲಿ ಕೇವಲ ವಿಶ್ರಾಂತಿಯ ಘಟ್ಟವಾಗಿರುತ್ತದೆ. ಈ ವಿಶ್ರಾಂತಿಯ ಘಟ್ಟವು ಅನೇಕ ಸಮಸ್ಯೆಯ ಸುಳಿಯಾಗಿರುವುದು. ಮುಪ್ಪಿನಲ್ಲಿ ಸ್ತ್ರೀ-ಪುರುಷ ಅನೇಕ ಸಮಸ್ಯೆಗಳ-ತೊಂದರೆಗಳ ಸುಳಿವಿನಲ್ಲಿ ಸಿಲುಕಿರುತ್ತಾರೆ. ಒಂದು ಸಮಸ್ಯೆ ಬಗಹರಿದರೆ ಮತ್ತೊಂದು ಸಮಸ್ಯೆ ಎದುರಾಗುವ ಪರಿಪಾಠವಾಗಿರುತ್ತದೆ. ಈ ವೃದ್ಧರ ಸಮಸ್ಯೆಗಳು ಇತ್ತೀಚಿನ ದಿನಗಳಲ್ಲಿ ಗಂಭೀರ ಸ್ವರೂಪದಾಗಿರುತ್ತವೆ. ಸರಕಾರದ ಯೋಜನೆಗಳಿಂದ ವಂಚಿತರಾಗಿ ಸಂಘ-ಸಂಸ್ಥೆ ಸಹಕಾರದ ಕೊರತೆಯಿಂದಾಗಿ ಮಕ್ಕಳ, ಮೊಮ್ಮಕ್ಕಳ ಆರೈಕೆಯಿಂದಾಗಿ ವಂಚಿತರಾಗಿ ಕುಟುಂಬದಿಂದ ಹೊರದೂಡಲ್ಪಟ್ಟಿರುವ ವೃದ್ಧರ ಸ್ಥಿತಿಗತಿ ಹೇಳತೀರದಾಗಿರುತ್ತದೆ. ಇಂತಹ ಗಂಭೀ ಸ್ವರೂಪದ ಸಮಸ್ಯೆಗಳನ್ನು ಶಾಶ್ವತವಾಗಿ ದೂರಮಾಡಲು ಅನೇಕ ಕಾರ್ಯಕ್ರಮಗಳನ್ನು, ಯೋಜನೆಗಳನ್ನು ಹಾಕಿಕೊಳ್ಳಬೇಕಾಗಿರುತ್ತದೆ. ವೃದ್ಧರು ಕೆಲವೊಂದು ಗಂಭೀರ ಪ್ರಮಾಣದ ಸಮಸ್ಯೆಗಳಲ್ಲಿ ಸಿಲುಕಿಕೊಂಡು ತಮ್ಮ ಜೀವನವನ್ನು ಸಾಗಿಸುವುದು ಸುಸ್ಥಿತಿಯಲ್ಲಿ ಕಂಡುಬರುವುದು ಸತ್ಯಸಂಗತಿಯಾಗಿರುತ್ತದೆ.

## ವೃದ್ಧರ ಸಮಸ್ಯೆಗಳ ಸ್ವರೂಪ:

* ಕೆಳಮಟ್ಟದ ಸ್ಥಾನಮಾನದ ಅಂತಸ್ತು.
* ಆರ್ಥಿಕವಾಗಿ ವಂಚಿತರು
* ಧಾರ್ಮಿಕವಾಗಿ ದೂರಲ್ಪಟ್ಟವರು
* ಸಾಮಾಜಿಕ ಭದ್ರತೆಯಿಂದ ವಂಚಿತರಾದವರು.
* ಕುಟುಂಬದ ಸದಸ್ಯರ ಆರೈಕೆಯಿಂದ ವಂಚಿತರಾದವರು.
* ಸಮಾಜಕ್ಕೆ ಭಾರವಾದವರು
* ವೃದ್ಧಾಶ್ರಮಗಳ ಕೊರತೆ.
* ವಯಸ್ಸಾದವರು, ಅಪ್ರಯೋಜಕರು ಎನ್ನುವ ಕೀಳರಿಮೆ.
* ಆರೋಗ್ಯದ ಸೌಲಭ್ಯದಿಂದ ವಂಚಿತರಾದವರು.
* ಏಕಾಂಗಿತನದಿಂದ ಕೂಡಿದವರು.
* ಮೂಲಭೂತ ಸೌಕರ್ಯದಿಂದ ವಂಚಿತರಾದವರು
* ಸರಕಾರ, ಸಂಘ ಸಂಸ್ಥೆಯ ಸಹಕಾರದಿಂದ ವಂಚಿತರಾದವರು.
* ಅಂದತ್ವ ಕಳೆದುಕೊಂಡವರು
* ಭಿಕ್ಷಾಟನೆ (ಬಿಕ್ಷೇ ಬೇಡಿ ಜೀವನ ಸಾಗಿಸುವರು)
* ವಸತಿ ರಹಿತ ಜೀವನ ಮುನ್ನಡೆಸುವರು.
* ವೈಧ್ಯಕೀಯ ಸಮಸ್ಯೆ
* ಉದ್ಯೋಗದ ಸಮಸ್ಯೆ

**ಅಧ್ಯಯನದ ವಿಧಾನಗಳು :**

ನಮ್ಮ ಸಂಸ್ಕೃತಿಯಲ್ಲಿ ಅನಾದಿಕಾಲದಿಂದ ನಡೆದುಬಂದ ಅವಿಭಕ್ತ ಕುಟುಂಬ ಪದ್ಧತಿಯಿಂದಾಗಿ ವೃದ್ದರ ಸಮಸ್ಯೆಯು ಈ ಹಿಂದೆ ಜಡಿಲವಾದುದು ಎನಿಸಿರಲಿಲ್ಲ. ಪ್ರಸ್ತುತ ಹಾದಿಯಲ್ಲಿ ನಡೆಯುತ್ತಿದ್ದು ಶಿಕ್ಷಣ, ನಗರೀಕರಣ, ಪಾಸ್ಚತಿಕರಣ ಹಾಗೂ ಔದ್ಯೋಗಿಕರಣದ ಪ್ರಭಾವದಿಂದಾಗಿ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿವೆ. ಕುಟುಂಬಗಳು ಸಹಜ ತೀವ್ರಗತಿಯಲ್ಲಿ ಬದಲಾವಣೆಯನ್ನು ಕಂಡುಕೊಳ್ಳುತ್ತವೆ. ಇಂತಹ ಕುಟುಂಬಗಳಲ್ಲಿ ವೃದ್ಧರ ಸ್ಥಿತಿಗತಿಯ ಶೋಚನೀಯ ಅವಿಭಕ್ತ ಕುಟುಂಬಗಳು ತಮ್ಮ ಸ್ಥಾನಮಾನವನ್ನು ಕಳೆದುಕೊಳ್ಳುದರಿಂದ ದಿನದಿನಕ್ಕೆ ವೃದ್ಧರ ಸಮಸ್ಯೆಗಳು ಪರಿಹರಿಸಲಾರದಂತಹ ಸ್ಥಿತಿ ಬಂದೊಗಿದೆ. ಮತ್ತು ವೃದ್ಧರ ಸಮಸ್ಯೆಗಳು ಜಟಿಲವಾಗತೊಡಗಿವೆ. ಇಂದೂ ನಮ್ಮ ದೇಶದಲ್ಲಿ ವೃದ್ಧರು ಒಂದು ರೀತಿಯ ಸಮಸ್ಯೆಗೆ ತುತ್ತಾಗಿದ್ದಾರೆ. ಈ ಹಿನ್ನಲೆಯಲ್ಲಿ ಎಷ್ಟೋ ವಯೋವೃದ್ಧರು ನಿರ್ಗತಿಕರಾಗಿ ಅಲ್ಲಲ್ಲಿ ಪ್ರಾರಂಭಿಸಿದ ಸೇವಾಸಂಸ್ಥೆ ಅಥವಾ ವೃದ್ಧಾಶ್ರಮಗಳನ್ನು ಅವಲಂಬಿಸಿದ್ದಾರೆ. ಬದಲಾಗುತ್ತಿರುವ ವಾತಾವರಣ ಮತ್ತು ಜೀವನ ಮೌಲ್ಯಗಳಲ್ಲಿನ ಬದಲಾವಣೆಗಳಿಂದಾಗಿ ಇಂದೂ ವೃದ್ಧರು ಹೆಚ್ಚು ನಿರ್ಲಕ್ಷಕ್ಕೆ ಒಳಗಾಗಿದ್ದಾರೆ. ಈಗಾಗಿ ವೃದ್ಧರಿಗೆ ಸಾಮಾಜಿಕ ಆಸರೆಯಾಗಿ ನಿಲ್ಲಬೇಕಾಗಿದೆ.

ಯಾದಗಿರಿ ತಾಲ್ಲೂಕಿನಲ್ಲಿ ಕಂಡುಬರುವ ವಯೋವೃದ್ದರ ಸ್ಥಿತಿಗತಿಗಳನ್ನು ಕುರಿತು ಸಂಶೋಧನಾ ಅಧ್ಯನಕ್ಕೆ ಆಯ್ಕೆ ಮಾಡಿಕೊಂಡಿದ್ದೇನೆ. ಈ ಸಂಶೋಧನಕ್ಕೆ 320 ಜನ ವಯೋವೃದ್ಧರನ್ನು ಆಯ್ಕೆ ಮಾಡಿಕೊಂಡಿದ್ದೇನೆ.

**ದತ್ತಾಂಶಗಳ ಸಂಗ್ರಹಣೆ :**

" ಆಧುನಿಕ ಸಮಾಜದಲ್ಲಿ ವಯೋವೃದ್ದರ ಸ್ಥಿತಿಗತಿಗಳು" ಅಧ್ಯನಕ್ಕೆ ಸಂಬಂಧಿಸಿದಂತೆ ಮುಖ್ಯವಗಿ ಪ್ರಾಥಮಿಕ ಮೂಲಗಳಾದ ಅವಲೋಕನ, ಸಂದರ್ಶನ, ಪ್ರಶ್ನಾವಳಿ ಮೂಲಕ ವಿವಿಧ ಅಧ್ಯನಗಳು, ಪುಸ್ತಕ ಮತ್ತು ವೃತ್ತ ಪತ್ರಿಕೆಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

**ದತ್ತಾಂಶಗಳ ವಿಶ್ಲೇಷಣೆ :**

ಯಾದಗಿರಿ ತಾಲ್ಲೂಕಾದ್ಯಂತ ಕ್ಷೇತ್ರಕಾರ್ಯ ನಡೆಸಿ ಪಡೆದ ಮಹಿತಿ ವ್ಯಕ್ತಿಗಳು ನೀಡಿದ ವಿವರಗಳು, ವಿವಿಧ ಸಂಘ ಸಂಸ್ಥೆಗಳು, ಸರಕಾರಿ ಇಲಾಖೆಯ ಮಾಹಿತಿಯ ದತ್ತಾಂಶಗಳನ್ನು ಒಂದುಗೂಡಿಸಿ ಮಾಹಿತಿಯನ್ನು ವಿಶ್ಲೇಷಣೆ ಮಾಡಿ ಫಲಿತಾಂಶವನ್ನು ವಿವರಿಸುತ್ತೇನೆ.

**ಅಧ್ಯಯನದ ಕ್ಷೇತ್ರ ಪರಿಚಯ :**

ಯಾದಗಿರಿ ತಾಲ್ಲೂಕಿನ ಭೂಮಿಯು ಹಲವಾರು ಸಂಪನ್ಮೂಲಗಳಿಂದ ಕೂಡಿಕೊಂಡಿದ್ದು ಸಂಪನ್ಮೂಲಗಳು ಮಾನವನಿಗೆ ಒಂದಲ್ಲ ಒಂದು ರೀತಿಯಲ್ಲಿ ಉಪಯೋಗಕ್ಕೆ ಸಹಾಯಕವಾಗಿದೆ.

ಗುಲಬರ್ಗಾ ಜಿಲ್ಲೆ ಕರ್ನಾಟಕದ ಉತ್ತರ ಭಾಗದಲ್ಲಿದೆ. 1956ರಲ್ಲಿ ಭಾರತದ ರಾಜ್ಯಗಳ ಮರುವಿಂಗಡನೆ ಯಾವಾಗ ಹೈದ್ರಾಬಾದ್ ಕರ್ನಾಟಕದ ಪ್ರದೇಶದಿಂದ ಅಂದಿನ ಮೈಸೂರು ರಾಜ್ಯಗಳ ಸೇರಿದ ಮೂರು ಜಿಲ್ಲೆಗಳಲ್ಲಿ ಒಂದು. ಈ ಜಿಲ್ಲೆಯಲ್ಲಿ ಯಾದಗಿರಿ ತಾಲ್ಲೂಕು ಎಂಬುದು ಸೇರಿಸಲಾಗಿತ್ತು. ಉತ್ತರದಿಂದ ದಕ್ಷಿಣಕ್ಕೆ ಇಳಿಜಾರಾಗಿದ್ದು, ಸಮುದ್ರಮಟ್ಟದಿಂದ 300 ರಿಂದ 600 ಮೀಟರ್ ಎತ್ತರದಲ್ಲಿದೆ. ಯಾದಗಿರಿ ತಾಲ್ಲೂಕಿನ ಪ್ರಮುಖ ನದಿ ಭೀಮಾ. ಇದು ಯಾದಗಿರಿ ನಗರಕ್ಕೆ ತೀರ ಹತ್ತಿರವಾಗಿರುತ್ತದೆ.

ಯಾದಗಿರಿಯು ಗುಲಬರ್ಗಾದಿಂದ 80 ಕಿ.ಮೀ. ಅಂತರದಲ್ಲಿದೆ. ಅಂತರರಾಜ್ಯ ಸಂಪರ್ಕ ಕಲ್ಪಿಸುದಕ್ಕೆ ರೈಲುಮಾರ್ಗ ಸೌಲಭ್ಯಗಳನ್ನು ಪಡೆದು ಕೊಂಡಿರುತ್ತದೆ. ಪ್ರಾಚೀನ ಕಾಲದಲ್ಲಿ ಯೋಗಗಿರಿ. ಯಾತಗಿರಿ, ಯಾದವಗಿರಿ, ಉತ್ತಿನಗಿರಿ ಎಂದು ಪ್ರಖ್ಯಾತ

ಪಡೆದುಕೊಂಡಿದೆ. ಯಾದಗಿರಿ ಪರಿವರ್ತನೆಗೊಳ್ಳುತ್ತಿರುವ ನಗರವಾಗಿದೆ. ಇದು ಅನೇಕ ವಲಸೆಯರಿಗೆ ಪ್ರತಿಯೊಂದು ಕ್ಷೇತ್ರದಲ್ಲಿ ಆಶ್ರಯ ತಾಣವಾಗಿದೆ. ಇತ್ತೀಚಿನ ದಿನಗಳಲ್ಲಿ ಹಳ್ಳಿಗಳಲ್ಲಿ ವಾಸಮಾಡುತ್ತಿರುವ ಕುಟುಂಬಗಳು ಕೃಷಿಕ್ಷೇತ್ರವನ್ನು ತೊರೆದು ಉದ್ಯೋಗವನ್ನಾಧರಿಸಿ ಮತ್ತು ವೈಭವದ ಜೀವನವನ್ನು ಸಾಗಿಸುದಕ್ಕೆ ವಲಸೆ ಬರುತ್ತಿದ್ದಾರೆ. ಇದರಿಂದ ನಗರವು ಬೃಹತ್ ಪ್ರಮಾಣದಲ್ಲಿ ಬೆಳೆದು ಹೆಚ್ಚಿನ ಜನಸಂದಣಿಯಿಂದ ಕೂಡಿದೆ.

ಯಾದಗಿರಿ ಪೂರ್ವಭಾಗಕ್ಕೆ ನೆರೆ ರಾಜ್ಯವಾದ ಆಂಧ್ರಪ್ರದೇಶ ಹೊಂದಿದ್ದು ಪಶ್ಚಿಮಕ್ಕೆ ಶಹಾಪೂರ, ಉತ್ತರಕ್ಕೆ ರಾಯಚೂರ ಜಿಲ್ಲಾಮತ್ತು ದಕ್ಷಿಣಕ್ಕೆ ಚಿತ್ತಾಪೂರ ತಾಲ್ಲೂಕುಗಳನ್ನು ಹೊಂದಿದೆ. ಈ ನಗರ ಶೈಕ್ಷಣಿಕವಾಗಿ ಪ್ರಗತಿ ಸಾಧಿಸಿದ್ದರಿಂದ ಯಾದಗಿರಿಯನ್ನು ಶೈಕ್ಷಣಿಕ ಜಿಲ್ಲೆಯನ್ನು ಮಾಡಲಾಗಿದೆ.ಈ ನಗರವು ಸುಮಾರು 100 ಕ್ಕೂ ಹೆಚ್ಚು ಹಳ್ಳಿಗಳನ್ನು ಹೊಂದಿದ್ದು, ಗ್ರಾಮೀಣ ಪ್ರದೇಶದಲ್ಲಿ ಕೃಷಿ ಅವಲಂಬಿತ ಕುಟುಂಗಳು ಹೆಚ್ಚಾಗಿ ಕಂಡುಬರುತ್ತದೆ. ಇಲ್ಲಿಯ ಭೂಮಿಯು ಅಷ್ಟೊಂದು ಫಲವತ್ತತೆಯಿಂದ ಕೂಡಿರದೆ ಕೇವಲ ಮಳೆಯ ಅವಲಂಬಿತ ಪ್ರದೇಶವಾಗಿದೆ. ಇಲ್ಲಿಯ ಪ್ರಮುಖ ಬೆಳೆಗಳು ಜೋಳ, ಸಜ್ಜೆ, ತೊಗರಿ, ಶೇಂಗಾ, ಹೆಸರು, ಮುಂತಾದವುಗಳು ಯಾದಗಿರಿಯ ಸುತ್ತಮುತ್ತಲಿನ ಭೂ ಪ್ರದೇಶವು ಬೆಟ್ಟಗುಡ್ಡಗಳಿಂದ ಕೂಡಿದ್ದು ಮಳೆಗಾಲದಲ್ಲಿ ಮಾತ್ರ ಹಚ್ಚು ಹಸಿರಿನಿಂದ ಸುಂದರವಾಗಿ ಕಂಡುಬರುವ ದೃಶ್ಯವಗಿದೆ. ಇಲ್ಲಿ ಕೆಲವೊಂದು ಭೂ ಪ್ರದೇಶಕ್ಕೆ ನೀರಾವರಿ ಸೌಲಭ್ಯಗಳನ್ನು ಕಲ್ಪಿಸುವ ಹಿತದೃಷ್ಟಿಯಿಂದ ಯಾದಗಿರಿ ನಗರದಿಂದ ಕೇವಲ 12 ಕಿ.ಮೀ. ಅಂತರದಲ್ಲಿರುವ ಹತ್ತಿಕುಣಿ ಗ್ರಾಮವು ಬೆಟ್ಟಗುಡ್ಡ ಮತ್ತು ಕಾಡುಗಳಿಂದ ಕೂಡಿರುವುದರಿಂದ ಈಗ್ರಾಮಕ್ಕೆ ಮತ್ತು ಸುತ್ತಮುತ್ತಲಿನ ಗ್ರಾಮಕ್ಕೆ ನೀರಾವರಿ ಯೋಜನೆಯನ್ನು ಕಲ್ಪಿಸಲಾಗಿದೆ. ಹತ್ತಿಕುಣಿ ಜಲಾಶಯವು ಸುಮಾರು 10,000 ಹೆಕ್ಟೇರ್ ಭೂ ಪ್ರದೇಶಕ್ಕೆ ಮಾತ್ರ ನೀರಾವರಿ ಸೌಲಭ್ಯವನ್ನು ಒಸಗಿಸಲಾಗಿದೆ. ಇದೇ ಮಾರ್ಗದಲ್ಲಿ ಸೌದಾಗರ ಆಣೆಕಟ್ಟನ್ನು ನಿರ್ಮಿಸಲಾಗಿದೆ. ಇದೇ ಒಂದೇ ಮಾರ್ಗದಲ್ಲಿ ಇರುವುದರಿಂದ ಈ ಎರಡು ಆಣೆಕಟ್ಟುಗಳ ಕೆಲವೊಂದು ಭೂ ಪ್ರದೇಶಕ್ಕೆ ಮಾತ್ರ ನೀರಾವರಿ ಸೌಲಭ್ಯವನ್ನು ಕೊಡುತ್ತವೆ. ಇತ್ತೀಚಿನ ದಿನಗಳಲ್ಲಿ ಮಳೆಯ ಅಭಾವದಿಂದ ಈ

ಆಣೆಕಟ್ಟು ನೀರಿನಿಂದ ಭರ್ತಿಯಾಗದೆ ಬರಿದಾಗಿರುತ್ತದೆ. ಇದರಿಂದ ಈ ಎರಡು ಆಣೆಕಟ್ಟು ನೀರಾವರಿ ಯೋಜನೆಯಿಂದ ಹತ್ತಿಕುಣಿ ಗ್ರಾಮ ಮತ್ತು ಸುತ್ತಮುತ್ತಲಿನ ಗ್ರಾಮಗಳು ನೀರಿನಿಂದ ವಂಚಿತರಾಗಿರುತ್ತಾರೆ. ಬೇರೆ ಮಾರ್ಗಕಾಣದೆ ಮತ್ತು ಕೆಲವೊಂದು ಕುಟುಂಬಗಳು ರಾಜಕೀಯ ಒತ್ತಡದಿಂದ ಮತ್ತು ಕೆಲವೊಂದು ಶೈಕ್ಷಣಿಕ ಒತ್ತಡದಿಂದ ತಮ್ಮ ಹೊಲಗಳಲ್ಲಿ ಪಂಪಸೆಟ್ ಅಳವಡಿಸಿಕೊಂಡು ನೀರಾವರಿ ಸೌಲಭ್ಯವನ್ನು ಪಡೆದಯಕೊಂಡು ಉತ್ತಮ ಸ್ಥಿತಿವಂತರಾಗಿದ್ದಾರೆ.

ಈ ನಗರದಲ್ಲಿ ಎಲ್ಲಾ ಜಾತಿ, ಜನಾಂಗ ಮತ್ತು ಧರ್ಮದ ಜನರು ವಾಸ ಮಾಡುತ್ತಿದ್ದು ಎಲ್ಲಕ್ಕಿಂತ ಹೆಚ್ಚಾಗಿ ಹಿಂದೂಗಳು ಕಂಡುಬರುತ್ತಾರೆ. ಇನ್ನಿತರ ಧರ್ಮದವರು ಸ್ವಲ್ಪ ಪ್ರಮಾಣದಲ್ಲಿ ವಾಸಮಾಡುತ್ತಾರೆ. ಆದರೆ ಯಾವುದೇ ಹಬ್ಬ ಹರಿದಿನಗಳಲ್ಲಿ ಸಾಮಾಜಿಕವಾಗಿ ಧಾರ್ಮಿಕವಾಗಿ ಎಲ್ಲರೂ ಒಂದೆ ಎನ್ನು ದೃಷ್ಟಿಕೋನವುಳ್ಳವರಾಗಿದ್ದಾರೆ. ಇಲ್ಲಿನ ಜನರು ಹೆಚ್ಚಾಗಿ ಕೂಲಿಕಾರ್ಮಿಕರಾಗಿ ಕಾರ್ಯ ನಿರ್ವಹಿಸುತ್ತಿದ್ದು, ಮುಸ್ಲಿಂ ಜನಾಂಗದವರು ಬೀಡಿ ಮಾಡುವ ಕಾಯಕ ಮತ್ತು ವ್ಯಾಪಾರದಲ್ಲಿ ತೊಡಗಿರುತ್ತಾರೆ. ಎಲ್ಲ ಜಾತಿಯ ಜನರು ಕಾರ್ಯ ನಿರ್ವಹಿಸುತ್ತಿರುವುದರಿಂದ ಮತ್ತು ಕೆಲವೊಂದು ಯೋಜನೆಗಳ ಸದುಪಯೋಗದಿಂದ ಮತ್ತು ಕೆಲವೊಂದು ಬೆಳೆಗಳಾದ ಭತ್ತ, ಶೇಂಗಾ, ತರಕಾರಿಗಳನ್ನು ಬೆಳೆದು ಆರ್ಥಿಕವಾಗಿ ಪ್ರಬಲರಾಗಲು ಪ್ರಯತ್ನಿಸುತ್ತಿದ್ದಾರೆ. ಆಡಳಿತದ ಹಿತದೃಷ್ಟಿಯಿಂದ ಗುಲಬರ್ಗಾ ಜಿಲ್ಲೆಯನ್ನು ವಿಭಜನೆ ಮಾಡಿ ಯಾದಗಿರಿ ತಾಲ್ಲೂಕನ್ನು ಜಿಲ್ಲಾಕೇಂದ್ರವನ್ನಾಗಿ ಘೋಷಣೆ ಮಾಡಲಾಗಿದೆ. ಇದು ಕರ್ನಾಟಕ ರಾಜ್ಯದ 30ನೇ ಜಿಲ್ಲೆಯಾಗಿ ಮಾರ್ಪಟ್ಟಿದೆ ಆದರೆ ತಾಲ್ಲೂಕಗಳ ರಚನೆಯ ವಿಳಂಬ ನೀತಿಯಿಂದ ಇದಕ್ಕೆ ಯಾವುದೇ ತಾಲ್ಲೂಕುಗಳನ್ನು ಸೇರಿಸಲಾಗಿರುವುದಿಲ್ಲ. ಈಗಾಗಲೇ ಜಿಲ್ಲಾ ಕೇಂದ್ರಕ್ಕೆ ಬೇಕಾಗಿರುವ ಬೌಗೋಳಿಕ ವಿಸ್ತೀರ್ಣದ ವ್ಯಾಪ್ತಿಯನ್ನು ಸರ್ವೆ ಮಾಡಲಾಗುತ್ತಿದೆ. ಒಂದು ಜಿಲ್ಲಾ ಕೇಂದ್ರಕ್ಕೆ ಬೇಕಾಗಿರುವ ಮೂಲಭೂತ ಸೌಕರ್ಯ ಸೌಲಭ್ಯಗಳನ್ನು ಪೂರೈಸುತ್ತಿದ್ದು, ಈ ತಾಲ್ಲೂಕಿನಲ್ಲಿ ಎಲ್ಲಾ ಜಾತಿ ಜನಾಂಗದ ಜನರ ಒಡನಾಟ ಉತ್ತಮವಾಗಿರುತ್ತದೆ. ನಾವೆಲ್ಲರೂ ಒಂದೆ ಎನ್ನು ಮನೋಭಾವನೆವುಳ್ಳವರಾಗಿದ್ದಾರೆ.

ಯಾದಗಿರಿಯುಶೈಕ್ಷಣಿಕವಾಗಿ ಬಹಳಷ್ಟು ಹಿಂದುಳಿದಿರುತ್ತದೆ. ಯವುದೇ ಒಂದು ಪರೀಕ್ಷೆ ಫಲಿತಾಂಶದಲ್ಲಿ ಕೊನೆಯ ಸ್ಥಾನದಲ್ಲಿ ಕಂಡುಬರುವ ಶೈಕ್ಷಣಿಕ ಜಿಲ್ಲೆಯಾಗಿರುತ್ತದೆ. ಈ

ತಾಲ್ಲೂಕಿನಲ್ಲಿ ಉನ್ನತ ವ್ಯಾಸಂಗದ ಮತ್ತು ವೃತ್ತಿಪರ ವ್ಯಾಸಂಗದ ಕೋರ್ಸ್‌ಗಳಾಗಲಿ ಇಲ್ಲಿ ಕಂಡು ಬರುವುದಿಲ್ಲ. ಇದರಿಂದ ಶೈಕ್ಷಣಿಕ ಗುಣಮಟ್ಟ ಗಣನೀಯವಾಗಿ ಕುಸಿಯುತ್ತಿದ್ದು, ಉನ್ನತ ವ್ಯಾಸಂಗಕ್ಕಾಗಿ ಬೇರೆ ಜಿಲ್ಲೆಗೆ ಹೋಗಿ ಶಿಕ್ಷಣವನ್ನು ಪಡೆಯಬಹುದಾಗಿದೆ.

'ಯಾದಗಿರಿ ನಗರದಲ್ಲಿ ಕೆಲವೊಂದು ಕಾರ್ಖಾನೆಗಳು ಸ್ಥಾಪನೆಗೊಂಡಿದ್ದು, ಇಂತಹ ಕಾರ್ಖಾನೆಗಳಲ್ಲಿ ಕಡುಬಡ ಕುಟುಂಬದ ಸ್ತ್ರೀಪುರುಷ ದಿನಕೂಲಿಗಳಾಗಿ ಕಾರ್ಯವನ್ನು ನಿರ್ವಹಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಕರ್ನಾಟಕ ರಾಷ್ಟ್ರೀಯ ಶಿಕ್ಷಣಸಂಸ್ಥೆ ಪ್ರಾದೇಶಿಕ ಕಾರ್ಯಗಾರ ಸ್ಥಾಪನೆಗೊಂಡು ಯಾದಗಿರಿ ನಗರವು ಪ್ರಗತಿಗೆ ಒಂದು ಮಹತ್ವದ ಮೈಲುಗಲ್ಲಾಗಿದೆ.

ಯಾದಗಿರಿ ಬೆಟ್ಟದ ಮೇಲೆ ಪಶ್ಚಮ ಭಾಗದಲ್ಲಿ ಒಂದು ಸಣ್ಣ ನೀರಿನ ಝುರಿ ಇದೆ. ಒಂದು ಬೊಗಸೆಯಷ್ಟೆ ನೀರು ಒಸರುತ್ತದೆ. ಬೊಗಸೆಯಲ್ಲಿ ನೀರು ಒಸರುತ್ತದೆ. ಬೊಗಸೆಯಲ್ಲಿ ನೀರು ತೆಗೆದುಕೊಂಡು ಕುಡಿದಾಗ ಪ್ರತಿಬೊಗಸೆಗೂ ನೀರು ಹೊಸ ರುಚಿಯಲ್ಲಿ ಕಾಣಿಸಿಕೊಳ್ಳುತ್ತದೆ. ಒಮ್ಮೆ ಒಗರು, ಒಮ್ಮೆ ಸಿಹಿ, ಒಮ್ಮೆ ಕಹಿ, ಒಮ್ಮೆ ಹುಳಿ ಹೀಗೆ ಪ್ರತಿಸಲಕ್ಕೂ ರುಚಿ ಭೇದವಾಗುತ್ತದೆ. ಇದನ್ನೊಂದು ಪವಾಡ ರೀತಿಯಲ್ಲಿ ನಾನು ಹೇಳುತ್ತಿಲ್ಲ. ಭೂಮಿಯೊಳಗಿನ ನೀರು ನಮ್ಮ ಬಾಯಿಯಲ್ಲಿ ರಾಸಾಯನಿಕ ಕ್ರಿಯೆ ಉಂಟು ಮಾಡುವುದರಿಂದ ರುಚಿ ಭೇದ ಉಂಟಾಗಬಹುದು. ಈ ನೀರನ್ನು ನಾನು ಬೊಗಸೆಯಿಂದ ಕುಡಿದು ರುಚಿ ಅನುಭವಿಸಿ ಹೇಳುತ್ತಿದ್ದೇನೆ.[7]

**ಯಾದಗಿರಿ ಎಂಬ ಹೆಸರು ಹೇಗೆ ಬಂತು?**

'ಅರಸರು ಪ್ರಜೆಗಳ ಹಾಗೂ ತಮ್ಮ ರಕ್ಷಣೆಗೋಸ್ಕರ ಭದ್ರವಾದ ಕೋಟೆ ಕೊತ್ತಲಗಳನ್ನು ಕಟ್ಟಿಸುತ್ತಿದ್ದರು. ಅವುಗಳಲ್ಲಿ ಗಿರಿದುರ್ಗ, ಜಲದುರ್ಗ, ವನದುರ್ಗಗಳೆಂದು ಮೂರು ವಿಧ. ಅಂತವುಗಳಲ್ಲಿ ನೈಸರ್ಗಿಕವಾಗಿ ಮಹತ್ವದ ರಕ್ಷಣೆಯನ್ನು ಒದಗಿಸುವ ಎತ್ತರದ ಗಿರಿದುರ್ಗದಲ್ಲಿ ಕಲಬುರ್ಗಿ ಜಿಲ್ಲೆಯ ತಾಲ್ಲೂಕು ಕೇಂದ್ರವಾದ ಯಾದಗಿರಿಯ ಗಿರಿದುರ್ಗವು ಒಂದು.[8]

'ಯಾದಗಿರಿ ಸ್ಥಳ ನಿಪ್ಪತ್ತಿಯ ಬಗ್ಗೆ ಜನ ಸಾಮಾನ್ಯರಲ್ಲಿ ಹಲವು ಬಗೆಯಾಗೆ ವ್ಯಕ್ತವಾಗಿದೆ. ಯಾದವರು ಆಳಿದ ಗಿರಿ, ಯಾದಗಿರಿ ಎಂಬ ಅಭಿಪ್ರಾಯ ಒಂದು ಈ ಹೇಳಿಕೆಯಲ್ಲಿ ಐತಿಹಾಸಿಕ ಆಧಾರಗಳಿಲ್ಲದಿರುವುದು ಸತ್ಯವಾದುದು. ಏಕೆಂದರೆ ಯಾದವರಿಂದ (ಕ್ರಿ.ಶ. 1187 ರಿಂದ 1318) ಈ ದುರ್ಗ ಆಳ್ವಿಕೆಗೆ ಒಳಪಟ್ಟಿದ್ದರೂ ಅವರಿಗಿಂತ ಹಿಂದೆ ಕಲ್ಯಾಣ ಚಾಲುಕ್ಯರ ಕಾಲಕ್ಕೆ (ಕ್ರಿ.ಶ. 973– 1162 ) ಸ್ವಲ್ಪ ಕಾಲದವರಿಗೆ ತಾತ್ಕಾಲಿಕ ರಾಜಧಾನಿಯಾಗಿದ್ದು ಈ ದುರ್ಗಕ್ಕೆ ಯಾದಗಿರಿ ಎಂದೇ ಐತಿಹಾಸಿಕ ಉಲ್ಲೇಖವಿದೆ. ಆದ್ದರಿಂದ ಯಾದವರಿಂದಾಗಿಯೇ ಈ ದುರ್ಗಕ್ಕೆ ಯಾದಗಿರಿ ಎಂದು ಹೆಸರು ಬಂದಿದೆ.[9]

'ಇನ್ನೊಂದು ಪ್ರಕಾರ : ಪ್ರಕೃತಿದತ್ತವದ ಈ ಗಿರಿಯು ಮಲಗಿದ ಎತ್ತಿನಂತೆ ಕಾಣುವುದರಿಂದ ಇದು ಎತ್ತಿನಗಿರಿ ಯಾದಗಿರಿಯಾಗಿದೆ. ಎನ್ನುತ್ತಾರೆ. ಇದುವರೆಗೂ ಯಾವುದೇ ಕೋನದಿಂದ ನೋಡಿದರೂ ಮಲಗಿದ ಎತ್ತಿನಂತೆ ಕಾಣದೇ ಇರುವುದು ತಿಳಿದುಬಂದಿದೆ.[10]

'ಭೌಗೋಳಿಕವಾಗಿ ಈ ಪ್ರದೇಶದಲ್ಲಿ ಇದೊಂದು ಇತರ ಗಿರಿಗಳಿಗಿಂತ ಎತ್ತರದ ಗಿರಿಯಾಗಿರುವುದು. ಆದ್ದರಿಂದ ಎತ್ತರಗಿರಿ, ಎದ್ದರಗಿರಿ,ಯಾತಗಿರಿಯಾಗಿ ರೂಪಗೊಂಡಿರುವುದು. ಕನ್ನಡ ವ್ಯಾಕರಣ ನಿಯಮಕ್ಕನುಸಾರವಾಗಿ 'ತ' ಕಾರವು 'ದ' ಕಾರವಾಗಿ ಪರಿವರ್ತನೆ ಯಾಗುತ್ತಿರುವುದರಿಂದ ಎತ್ತರ ಉದ್ದರವಾಗಿದೆ ಹಾಗೆ ಸೌಲಭ್ಯಾಂಕ್ಷೆಯಿಂದ ದ್ವಿತ್ ಮತ್ತು ರ್ ಕಾರಗಳ ಲೋಪವಾಗಿ ಧನಿ ಸಾದೃಶ್ಯವಾಗಿ 'ಎ' ಕಾರ 'ಯ' ಕಾರವಾಗಿ ಎದ್ದಗಿರಿ, ಯಾತಗಿರಿ ಆಗಿರಬೇಕೆಂದು ನಮ್ಮ ಸ್ಪಷ್ಟ ಅನಿಸಿಕೆ.[11]

# ಅಡಿ ಟಿಪ್ಪಣೆಗಳು


1. ಡಾ. ಎಚ್. ಡಿ ಪ್ರಶಾಂತ್ – ಪ್ರಜಾವಾಣಿ ಪತ್ರಿಕೆ – 13/11/2004

2. ಡಾ. ಎಚ್. ಡಿ ಪ್ರಶಾಂತ್ – ಪ್ರಜಾವಾಣಿ ಪತ್ರಿಕೆ – 13/11/2004

3. ಡಾ. ಡಿ. ಕೆ. ಮಹಾಬಲರಾಜ್ – ಸಂಯುಕ್ತ ಕರ್ನಾಟಕ – 28/09/2004

4. ಡಾ. ಡಿ. ಕೆ. ಮಹಾಬಲರಾಜ್ – ಸಂಯುಕ್ತ ಕರ್ನಾಟಕ – 28/09/2004

5. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ
ಕ.ವಿ.ವಿ. ಹಂಪಿ. ಪು.ಸಂ – 01

6. ಡಾ. ಕೆ. ಜಿ. ಗುರಮೂರ್ತಿ – ವೃದ್ಧಾಪ್ಯ : ಸಮಸ್ಯೆಗಳು ಹಾಗೂ ನಿವರಣೆಗಳು
– 1999 ಪ್ರ. ಕರ್ನಾಟಕ ವಿ.ವಿ. ದಾರವಾಡ ಪು.ಸಂ –01

7. ಯಂಕಣ್ಣ ದೊಣ್ಣೆಗೌಡ್ರು – ಯಾದಗಿರ ತಾಲ್ಲೂಕಿನ ವಾಸ್ತು ಶಿಲ್ಪ – 2001
ಸೋನಿ ಪ್ರಕಾಶನ ಯಾದಗಿರಿ – ಮುನ್ನುಡಿ.

8. ಯಂಕಣ್ಣ ದೊಣ್ಣೆಗೌಡ್ರು – ಯಾದಗಿರ ತಾಲ್ಲೂಕಿನ ವಾಸ್ತು ಶಿಲ್ಪ – 2001
ಸೋನಿ ಪ್ರಕಾಶನ ಯಾದಗಿರಿ. ಪು.ಸಂ – 01

9 ಯಂಕಣ್ಣ ದೊಣ್ಣೆಗೌಡ್ರು – ಯಾದಗಿರ ತಾಲ್ಲೂಕಿನ ವಾಸ್ತು ಶಿಲ್ಪ – 2001
ಸೋನಿ ಪ್ರಕಾಶನ ಯಾದಗಿರಿ. ಪು.ಸಂ – 01

10. ಯಂಕಣ್ಣ ದೊಣ್ಣೆಗೌಡ್ರು – ಯಾದಗಿರ ತಾಲ್ಲೂಕಿನ ವಾಸ್ತು ಶಿಲ್ಪ – 2001
ಸೋನಿ ಪ್ರಕಾಶನ ಯಾದಗಿರಿ. ಪು.ಸಂ – 01

# ಅಧ್ಯಾಯ 2

## ವಯೋವೃದ್ಧರ ಪರಿಕಲ್ಪನೆ

### 2.1 ವಯೋವೃದ್ದರ ಪ್ರಕಾರಗಳು

### 2.2 ವಯೋವೃದ್ದರ ಬಗ್ಗೆ ಕುರಿತು ನಡೆದ ಅಧ್ಯಯನಗಳು

ವೃದ್ಧರು ಎಂದರೆ ಯಾರು? ಮುದಕರೆಂದು ಕರೆಯಬಹುದು. ಮುಪ್ಪು ಪ್ರಾರಂಭವಾಗುವುದು ಯಾವಾಗ? ನಲವತ್ತೈದು ವರ್ಷ ವಯಸ್ಸಿನಲ್ಲೇ? ಐವತ್ತು ವರ್ಷಕ್ಕೆ, ಅರವತ್ತು ಅಥವಾ ಅರವತ್ತೈದು ವರ್ಷಕೆಕ ಇಂತ ಪ್ರಶ್ನೆಗಳಿಗೆ ಉತ್ತರ ಹೇಳುವುದು ಕಷ್ಟ. ಕೆಲವರು ಬೇಗನೆ ಮುದುಕರಾಗುತ್ತಾರೆ. ಅಂಥವರಲ್ಲಿ ೪೫ ಅಥವಾ ೫೦ ವಯಸ್ಸಿಗೆ ಮುಪ್ಪಿನ ಲಕ್ಷಣಗಳು ಕಾಣಸಿಕೊಳ್ಳುತ್ತವೆ. ಮತ್ತು ಕೆಲವರು ೬೫ ಅಥವಾ ೭೦ ವರ್ಷವಾದರೂ ಗಟ್ಟಿಮುಟ್ಟಾಗಿರುತ್ತಾರೆ. ಹೀಗೆ ನಮ್ಮ ಪ್ರಾಯದ ಮೇಲಿಂದ ಮುಪ್ಪಿನ ಗೆರೆ ಕೊರೆಯುವುದು ಸಾಧ್ಯವಿಲ್ಲ. ಆದರೂ ನಮ್ಮಲ್ಲಿ ಹಿಂದೆ ಅರವತ್ತು ವರ್ಷವಾದರೆ ಒಂದು ಹಂತವನ್ನು ತಪ್ಪಿದಂತೆ ಎಂಬ ಭಾವನೆ ಇತ್ತು. ಹಿಂದೂಗಳು ಅರವತ್ತು ಸಂವತ್ಸರಗಳನ್ನು ಮತ್ತೆ ಎಣಿಸುತ್ತಾರೆ. ಅರವತ್ತು ವರ್ಷ ತುಂಬಿದ ಮೇಲೆ ಶಾಂತಿ ಮಾಡುವುದು ಮತ್ತು ಸಮಾರಂಭಗಳನ್ನು ಏರ್ಪಡಿಸುವುದು ರೂಢಿಯಲ್ಲಿದೆ. ಅರವತ್ತು ವರ್ಷವಾದ ಮೇಲೆ ಅನಿಷ್ಠಗಳು ಬರಬಹುದೆಂದು ಹೆದರುತ್ತಾರೆ. ಹಾಗೆಯೇ ಅರವತ್ತು ನಂತರ ಮನುಷ್ಯನ ಬುದ್ಧಿಶಕ್ತಿ ಕಡಿಮೆಯಾಗುತ್ತದೆ. ಶಾರೀರಕ ಶಕ್ತಿ ಕುಗ್ಗುತ್ತದೆ ಎಂಬ ಕಲ್ಪನೆಯೂ ಇದೆ. ಅರವತ್ತಕ್ಕೆ ಅರಳು ಮರಳು ಎಂಬ ಗಾದೆ ಇದೆ ಮಾತನ್ನು ಹೇಳುತ್ತದೆ.

**ವೃದ್ಧರ ಪರಿಕಲ್ಪನೆ:**

'ವಯಸ್ಸಾಗುವಿಕೆಯು ಒಂದು ನಿರಂತರ ಪ್ರಕ್ರಿಯೆ. ವಯಸ್ಸಾದವರು ಒಂದು ಗುಂಪು ಜೈವಿಕ ಪ್ರಕ್ರಿಯೆಗಾಗಿ ವಯಸ್ಸಾಗುವುದು ಹುಟ್ಟಿನಿಂದಲೆ ಆರಂಭವಾಗುತ್ತದೆ. ವಯಸ್ಸಾಗುವುದು ಎನ್ನುವುದು ವಯಸ್ಸಿನ ಪರಿಣಾಮ ಅಂದರೆ ಕುಂದುವ ದೇಹದ ಸಾಮರ್ಥ್ಯ ಅಥವಾ ಕುಗ್ಗುತ್ತಾ ಸಾಗುವ ಮಾನವನ ದೈಹಿಕ ಸ್ಥಿತಿ. ತನ್ನ ಸಹಜ ಸ್ಥಿತಿಗನುಗುಣವಾಗಿ ನಿಧಾನವಾಗಿ ಹೊಂದುವ ಅವನತಿ ಇತ್ಯಾದಿ. ಬಿಕ್ಕನ್ ಮತ್ತು ರೆನ್ನರ್‌ರಿಗೆ "ವಯಸ್ಸಾಗುವುದೆಂದರೆ ಜೈವಿಕ ಬದಲಾವಣೆಯನ್ನು ಪ್ರತಿನಿಧಿಸುವುದು ಎಂದರ್ಥ. ಜೀವಿಗಳಲ್ಲಿ ಕಾಲಾನುಕ್ರಮೇಣ ವಯಸ್ಸಿಗನುಗುಣವಾಗಿ ಹೊಂದುವ ಬದಲಾವಣೆಗಳು." ವಯಸ್ಸಾಗುವವಿಕೆಯ ಈ ಪ್ರಕ್ರಿಯೆಯು ಬೆಳವಣಿಗೆ ಮತ್ತು ವಿಕಾಸದೊಂದಿಗೆ ಮಿಳಿತಗೊಂಡಿದೆ.[1]

'ಮಾನವ ಮುಪ್ಪಿಗುವಿಕೆ ಮತ್ತು ಜನಸಂಖ್ಯೆಯ ಮುಪ್ಪಾಗುವಿಕೆಗಳೆರಡೂ ಬೇರೆ ಬೇರೆ ಪರಿಕಲ್ಪನೆಗಳು. ವಯಸ್ಸಾದ ಜನಸಂಖ್ಯೆ ಎನ್ನುವುದು, ವಯಸ್ಸಾದವರ ಸಂಖ್ಯೆ ಒಟ್ಟು ಜನಸಂಖ್ಯೆ ಶೇ. ೭%ನ್ನು ಮೀರಿದ್ದೆಂದು ಅರ್ಥ. ಶೇ.೪% ರಿಂದ ೭% ಇದ್ದರೆ ಅದು ಪ್ರೌಢ ಮತ್ತು ಶೇ.೮% ಕ್ಕಿಂತಲೂ ಕಮ್ಮಿಯಿದ್ದರೆ ಅದು ಯುವ (ವಿಶ್ವಸಂಸ್ಥೆ ೧೯೫೬) ಜನಸಂಖ್ಯೆಯು ಮುಪ್ಪಾಗುವಿಕೆಯ ಒಂದು ಸರಳ ಹಾಗೂ ಜಾಗತಿಕವಾಗಿ ಒಪ್ಪಲ್ಪಡುವ ಪರಿಕಲ್ಪನೆಯಾಗಿದೆ. ಅಲ್ಲದೆ ಅದು 'ವಯಸ್ಸಾದ' ಜನರು ಮತ್ತು ಒಟ್ಟು ಜನಸಂಖ್ಯೆಯನ್ನು ಅವಲಂಬಿಸಿರುತ್ತದೆ. ಈ ಉದ್ಭವಿಸುವ ಪ್ರಶ್ನೆಯೆಂದರೆ ಯಾರು ವಯಸ್ಸಾದವರು? ಅಥವಾ ಮುದುಕರು 'ವೃದ್ಧರು' ಅಥವಾ 'ಹಿರಿಯ' ನಾಗರೀಕರು ಇನ್ನು ಮುಂತಾದ ಪದಗಳನ್ನು ಸಮಾನಾರ್ಥಕವಾಗಿ ಅದಲು ಬದಲಾಗಿ ಉಪಯೋಗಿಸಲಾಗುತ್ತದೆ. ವೃದ್ಧರೆಂದರೆ ಹೆಚ್ಚು ವಯಸ್ಸಾದವರು ಅಥವಾ ದೀರ್ಘಕಾಲ ಬದುಕಿದವರು. ೨೦ನೆಯ ಶತಮಾನದ ಚೇಂಬರ್ಸ್ ನಿಘಂಟಿನ ಪ್ರಕಾರ ವಯಸ್ಸಾಗುವಿಕೆಯು ಮುನ್ನುಗ್ಗುತ್ತಾ ಸಾಗುವ ಕ್ರಿಯೆ ಅಥವಾ ಮುಪ್ಪಿನ (ಪ್ರೌಢ ಅಥವಾ ವಯಸ್ಸಾದ ಜೀವಿಯ) ಲಕ್ಷಣಗಳನ್ನು ಬೆಳೆಸಿಕೊಳ್ಳುವುದು. ವಯಸ್ಸಾಗುವುದೆಂದರೆ ಕಳೆದು ಹೋದ ವರ್ಷಗಳ ಲೆಕ್ಕ ಅಥವಾ ತುಂಬಾ ವರ್ಷಗಳ ಬದುಕನ್ನು ಸೂಚಿಸಿದರೆ, ವೃದ್ಧಾಪ್ಯವು ವಯಸ್ಸಾದ ಲಕ್ಷಣಗಳನ್ನು, ವಯಸ್ಸಿನಿಂದ ಶರೀರಕ್ಕಾದ ಅವನತಿಯನ್ನು ತೋರುತ್ತದೆ. ಹೀಗಾಗಿ ಒಬ್ಬ ಜನಸಾಮಾನ್ಯನು ವಯಸ್ಸಾದವರನ್ನು ನಿಜ ಜೀವನದಲ್ಲಿ ಒಂದು ನಿರ್ದಿಷ್ಟ ವಯಸ್ಸನ್ನು, ಮುಪ್ಪಿನ ಆರಂಭ ಅಥವಾ ಮುಪ್ಪು ಎಂದು ಪರಿಗಣಿಸಬೇಕಾಗುತ್ತದೆ.[2]

'ವೃದ್ಧರು ಎಂದರೆ ಯಾರು? ಎಂಬುದು ಸಂಸ್ಕೃತಿಯಿಂದ ಸಂಸ್ಕೃತಿಗೆ ಭಿನ್ನವಾಗುತ್ತದೆ. ಕೆಲವು ಸಂಸ್ಕೃತಿಗಳಲ್ಲಿ ಹೆಚ್ಚು ವಯಸ್ಸಾದವರನ್ನು ಅಂದರೆ ಜೈವಿಕ ವಿಚಾರಗಳ ಆಧಾರದ ಮೇಲೆ ವೃದ್ಧರು ಎಂದು ಪರಿಗಣಿಸಿದರೆ ಉಳಿದವು ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಗಣನೆಗೆ ತೆಗೆದುಕೊಂಡಿವೆ. ಜೈವಿಕ ರೀತಿಯಿಂದ ವೃದ್ಧರು ಎಂದರೆ ವಯಸ್ಸಾದವರು, ಮುದುಕರು, ಸಾವಿಗೆ ಹತ್ತಿರ ಬಂದವರು ಮುಂತಾದ ವಿವರಣೆಯನ್ನು ನೀಡಬಹುದು. ಇನ್ನೂ ಕೆಲವು ಸಂಸ್ಕೃತಿಗಳು ವೃದ್ಧಾಪ್ಯಕ್ಕೆ ಒಂದು ಮಾನಸಿಕ ವಿವರಣೆ ನೀಡಿವೆ. ಅಂದರೆ ಕೆಲವರು ವಯಸ್ಸಾದರು ತರುಣ ಚೇತನ, ಚಟುವಟಿಕೆ ಹೊಂದಿರುತ್ತಾರೆ. ಇದು ಅವರ ವ್ಯಕ್ತಿತ್ವದ ಮೇಲೆ ಅವಲಂಬಿತವಾಗಿರುತ್ತದೆ. ಮತ್ತೆ ಕೆಲವರು ವಯಸ್ಸಿನಲ್ಲಿ ತರುಣರಿದ್ದರೂ ಮಾನಸಿಕವಾಗಿ ವೃದ್ಧರ ಮನೋಭಾವನೆ ಪಡೆದಿರುತ್ತಾರೆ. ಆದ್ದರಿಂದ ಯಾವುದೇ ಒಂದು ನಿರ್ದಿಷ್ಟ ವಯಸ್ಸನ್ನು ತೆಗೆದುಕೊಂಡು ಇವರು ವೃದ್ಧರು ಎಂದು ಹೇಳಲು ಬರುವುದಿಲ್ಲ.[3]

## ಪ್ರಾಚೀನ ಸಮಾಜಗಳಲ್ಲಿ ವೃದ್ಧರ ಸ್ಥಾನಮಾನ

'ಪ್ರಾಚೀನ ಸಮಾಜಗಳಲ್ಲಿ ವೃದ್ಧರಿಗೆ ಬಹಳ ಗೌರವ ಸಿಗುತ್ತಿತ್ತು. ಇದಕ್ಕೆ ಅನೇಕ ಕಾರಣಗಳಿದ್ದವು. ಆಗಿನ ಕಾಲದಲ್ಲಿ ರೋಗರುಜಿನಗಳಿಗೆ ತುತ್ತಾಗದೇ ಬಹಳ ದಿನಗಳ ಕಾಲ ಉಳಿಯುವುದು ಒಂದು ದೊಡ್ಡ ವಿಷಯ. ಒಂದು ಅದ್ಭುತವೆಂದರೂ ನಡೆದಿತು. ಹಾಗೆ ಬದುಕಿ ಉಳಿದವರು ಗಟ್ಟಿ ಜೀವ ಎನ್ನಿಸಿಕೊಳ್ಳುತ್ತಿದ್ದರು. ಆಗ ಜನರ ಸರಾಸರಿ ಆಯುರ್ಮಾನ ಕಡಿಮೆ ಇರುತ್ತಿತ್ತು. ಇದರಂತೆಯೇ ಮುದುಕರ ಸಂಖ್ಯೆಯೂ ಅತಿ ಕಡಿಮೆ ಇರುತ್ತಿತ್ತು. ಇದರಂತೆಯೇ ಮುದಕರ ಸಂಖ್ಯೆಯೂ ಅತಿ ಕಡಿಮೆ ಇರುತ್ತಿತ್ತು. ಹೀಗೆ ಕಡಿಮೆ ಸಂಖ್ಯೆಯಲ್ಲಿರುವ ಅವರು ಯಾರಿಗೂ ಭಾರವಾಗುತ್ತಿರಲಿಲ್ಲ. ಇದಕ್ಕೆ ಕಾರಣವೆಂದರೆ ಬೇಸಾಯಗಾರರ ಕುಟುಂಬಗಳಲ್ಲಿ ಅವರು ಹಣ್ಣು ಹಣ್ಣು ಮುದುಕರಾಗುವ ತನಕ ತಮ್ಮ

ಕೈಲಾದಷ್ಟು ಕೆಲಸ ಮಾಡಬಹುದಾಗಿತ್ತು. ಆ ಕುಟುಂಬಗಳಲ್ಲಿರುವ ಮುದುಕಿಯರು ತಮ್ಮ ಮಕ್ಕಳು, ಮೊಮ್ಮಕ್ಕಗಳು ಕಾಹಿಲೆ ಬಿದ್ದಾಗ ಅವರಿಗೆ ಔಷಧಿ ತಯಾರಿಸಿ ಕೊಡುತ್ತಿದ್ದರು. ರೋಗಿಗಳ ಆರೈಕೆ ಮಾಡುತ್ತಿದ್ದರು. ಓದು ಬರಹವನ್ನು ಬಲ್ಲ ಅಜ್ಜಂದಿರು ತಮ್ಮ ಮೊಮ್ಮಕ್ಕಳಿಗೆ ಅಷ್ಟು ಇಷ್ಟು ವಿದ್ಯೆ ಕಲಿಸುತ್ತಿದ್ದರು. ಏನಿಲ್ಲ ಎಂದರೂ ಈ ಮುದುಕ ಮುದುಕಿಯರ ಮನೆಯನ್ನು ಕಾಯಬಹುದಾಗಿತ್ತು ಅಥವಾ ಚಿಕ್ಕಮಕ್ಕಳನ್ನು ನೋಡಿಕೊಳ್ಳಬಹುದಾಗಿತ್ತು. ನೇಕಾರಿಕೆ, ಕುಂಬಾರತನ, ಬಡಿಗತನ, ಕಮ್ಮಾರಿಕೆ ಮುಂತಾದ ಕಸಬುಗಳನ್ನು ಮಾಡುವ ಜನರು ಬಹಳ ವಯಸ್ಸಾದರೂ ದುಡಿಯುತ್ತಲೇ ಇರುವುದು ಸಾಧ್ಯವಿತ್ತು. ಹಳ್ಳಿಯ ಕಸುಬುಗಳೇ ಹಾಗೆ. ಅವುಗಳಿಗೆ ನಿವೃತ್ತಿಯ ವಯಸ್ಸು ಇಲ್ಲ. ಹೀಗೆ ಕೊನೆಯವರೆಗೂ ದುಡಿದು ಸ್ವಲ್ಪಾದರೂ ಗಳಿಸುತ್ತಿದ್ದ ವೃದ್ಧರಿಗೆ ಕುಟುಂಬವು ಮರ್ಯಾದೆಯನ್ನು ಕೊಡುವುದು ಸಹಜ.

ಇನ್ನೊಂದು ಕಾರಣಕ್ಕಾಗಿಯೂ ವೃದ್ಧರಿಗೆ ಗೌರವ ಸಿಗುತ್ತಿತ್ತು. ಆ ಕಾಲದಲ್ಲಿ ಅವರ ಇನ್ನೊಂದು ಕಾರಣಕ್ಕಾಗಿಯೂ ವೃದ್ಧರಿಗೆ ಗೌರವ ಸಿಗುತ್ತಿತ್ತು. ಆ ಕಾಲದಲ್ಲಿ ಅವರ ಅನುಭವ ಎಂದರೆ ಒಂದು ದೊಡ್ಡ ಆಸ್ತಿ ಇದ್ದ ಹಾಗೆ. ಅಂದಿನ ಕಾಲದಲ್ಲಿ ಈಗಿರುವ ಹಾಗೆ ಶಿಕ್ಷಣ, ತರಬೇತಿ, ಯಂತ್ರ-ತಂತ್ರ ಇರಲಿಲ್ಲ. ವಯಸ್ಸಾದ ತಂದೆ ಅಥವಾ ಅಜ್ಜನನ್ನು ನೋಡಿ ಎಳೆಯರು ತಮ್ಮ ಕಸುಬುಗಳನ್ನು ಕಲಿತುಕೊಳ್ಳುತ್ತಿದ್ದರು. ಅನುಭವಿಯಾದ ವೈದ್ಯನು ತನ್ನ ಮಗನಿಗೆ ತಾನು ಗಳಿಸಿದ ವಿದ್ಯೆಯನ್ನು ಕೊಡುತ್ತಿದ್ದರು. ಅದೇ ರೀತಿಯಲ್ಲಿ ಅನುಭವಿಗಳಾದ ಸಂಗೀತಗಾರರು, ನಟರು, ಶಿಲ್ಪಿಗಳು, ಪುರೋಹಿತರು, ಪಂಡಿತರು ತಮ್ಮ ಶಿಷ್ಯರನ್ನು ತರಬೇತುಗೊಸುತ್ತಿದ್ದರು. ಹೀಗೆ ಕಲಿಸುವ ಗುರುಗಳೆಲ್ಲ ವಯಸ್ಸಿನಲ್ಲಿ ಹಿರಿಯರೇ ಇರುತ್ತಿದ್ದರು. ಇದರಿಂದಾಗಿ ವಯಸ್ಸಿಗೆ ಮರ್ಯಾದೆ ಸಿಗುವುದು ವಾಡಿಕೆಯಾಗಿತ್ತು.

ಪ್ರಾಚೀನ ಕಾಲದಲ್ಲಿ ವಯಸ್ಸಿಗೆ ಮರ್ಯಾದೆ ಸಿಗಲು ಇನ್ನೊಂದು ಕಾರಣವಿದೆ. ಪ್ರತಿಯೊಂದು ಕುಟುಂಬಕ್ಕೂ, ಹಾಗೂ ಪ್ರತಿಯೊಂದು ಸಮುದಾಯಕ್ಕೂ ಹಿರಿಯರ ಅಗತ್ಯ ಇರುತ್ತದೆ. ಹಿಂದಿನ ಕಾಲದಲ್ಲಿ ಲಿಖಿತ ದಾಖಲೆಗಳು ಇರಲಿಲ್ಲ. ತಮ್ಮ ಸಮುದಾಯಗಳಲ್ಲಿ ಆದ ವಾದ ವಿವಾದಗಳ ಬಗ್ಗೆ ಅಥವಾ ಕರಾರುಗಳ ಬಗ್ಗೆ ಮಾಹಿತಿ ಬೇಕಾದರೆ ಅವರು ಹಿರಿಯರನ್ನೇ ಕೇಳಬೇಕಾಗುತ್ತಿತ್ತು. ಹಿರಿಯರು ಸಮುದಾಯದ ವಾಡಿಕೆ ಸಂಪ್ರದಾಯಗಳನ್ನು ತಿಳಿದುಕೊಂಡು ಉಳಿದವರಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಅದೇ ರೀತಿಯಲ್ಲಿ ಜನರ

ಜಗಳಗಳನ್ನು ಬಗೆಹರಿಸಲು ಅವರು ಕಿರಿಯರಿಗಿಂತ ಹೆಚ್ಚು ಸಮರ್ಥರಾಗಿದ್ದರು. ಆದುದರಿಂದ ಹಿಂದಿನ ಕಾಲದಲ್ಲಿ ಗ್ರಾಮಗಳು ಪಂಚರು ಹೆಚ್ಚಾಗಿ ವಯೋವೃದ್ಧರೇ ಇರುತ್ತಿದ್ದರು.

ಒಟ್ಟಿನಲ್ಲಿ ಹಿಂದೆ ಕುಟುಂಬ ಮತ್ತು ಸಮುದಾಯಗಳಲ್ಲಿ ಹಿರಿಯ ತಲೆಮಾರಿನವರಿಗೆ ಹೆಚ್ಚಿನ ಗೌರವ ಸಿಗುತ್ತಿತ್ತು.[4]

## ವಯೋವೃದ್ಧರ ಪ್ರಕಾರಗಳು

ಸಾಮಾನ್ಯವಾಗಿ ಅರವತ್ತು ವರ್ಷಕ್ಕಿಂತ ಮೇಲ್ಪಟ್ಟ ಎಲ್ಲಾ ಜಾತಿ ಮತ್ತು ಧರ್ಮಗಳಲ್ಲಿ ವೃದ್ಧರು ಕಂಡುಬರುತ್ತಾರೆ. ಪ್ರತಿಯೊಂದು ಜಾತಿಧರ್ಮಗಳ ರೂಢಿ, ಸಂಪ್ರದಾಯಗಳು ಆಚರಣೆಯಲ್ಲಿರುವುದು ಸರ್ವೆಸಂಗತಿ. ಆದರೆ ಪ್ರತಿಯೊಂದು ಜಾತಿ ಧರ್ಮಗಳಲ್ಲಿ ವಯೋವೃದ್ಧರ ಜೀವನದ ಸ್ಥಿತಿಗತಿಗಳು ವಿಭಿನ್ನತೆಗಳಿಂದ ಕೂಡಿರುತ್ತದೆ. ವೃದ್ಧರ ಬಾಳುವ ರೀತಿ ಬದುಕನ್ನು ರೂಡಿಸಿಕೊಂಡು ಬಂದಿರುವ ವ್ಯವಸ್ಥೆ ವೃದ್ಧರನ್ನು ಮುಂದಿನ ದಿನಗಳಲ್ಲಿ ಹೆಚ್ಚಿನ ಕಾಲ ಬದುಕುವ ಒಂದು ಆಶಾಕಿರಣವನ್ನು ಹೊಂದಿರುತ್ತಾರೆ. ಆಧುನಿಕ ಸಮಾಜದಲ್ಲಿ ವಯೋವೃದ್ಧರು ಇತ್ತೀಚಿನ ದಿನಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಿದ್ದಾರೆ. ಜನನ ಪ್ರಮಾಣದ ಏರಿಕೆ, ಮರಣದ ಪ್ರಮಾಣದ ಇಳಿಮುಖವಾಗಿರುವುದರಿಂದ ವೃದ್ಧರು ಒಂದು ಸಾಮಾಜಿಕ ಸಮಸ್ಯೆಯಾಗಿರುತ್ತಾರೆ.

## ವಯೋವೃದ್ಧರ ಪ್ರಕಾರಗಳು:

ಸಾಮಾನ್ಯವಾಗಿ ವೃದ್ಧರಲ್ಲಿ ನಾಲ್ಕು ಪ್ರಕಾರಗಳಾಗಿ ವಿಭಾಗ ಮಾಡಲಾಗುತ್ತದೆ.

೧. ಸಾಮಾನ್ಯ ವೃದ್ಧರು,

೨. ಪಿಂಚಣಿ ಸೌಲಭ್ಯ ಪಡೆಯುವ ವೃದ್ಧರು.

೩. ವೃದ್ಯಾಪ್ಯ ವೇತನ ಪಡೆಯುವ ವೃದ್ಧರು

೪. ವಿಧವಾ ವೇತನ ಪಡೆಯುವ ಮಹಿಳಾ ವೃದ್ಧರು

## ೧. ಸಾಮಾನ್ಯ ವೃದ್ಧರು:

ಸಾಮಾನ್ಯ ವಯೋವೃದ್ಧರು ಎಲ್ಲ ಜಾತಿ, ಧರ್ಮಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಕಾಣಿಸಿಕೊಳ್ಳುತ್ತಾರೆ. ಇವರಿಗೆ ಯಾವುದೇ ರೀತಿಯ ಆರೈಕೆ, ರಕ್ಷಣೆ, ಪಾಲನೆ ಪೋಷಣೆ ಮತ್ತು

ಸಾಮಾನ್ಯ ವಯೋವೃದ್ಧರು ಎಲ್ಲ ಜಾತಿ, ಧರ್ಮಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಕಾಣಿಸಿಕೊಳ್ಳುತ್ತಾರೆ. ಇವರಿಗೆ ಯಾವುದೇ ರೀತಿಯ ಆರೈಕೆ, ರಕ್ಷಣೆ, ಪಾಲನೆ ಪೋಷಣೆ ಮತ್ತು ಸಾಮಾಜಿಕ ಭದ್ರತೆ ಇರುವುದು ಹೇರಳವಾಗಿರುವುದಿಲ್ಲ. ಕೆಲವೊಂದು ವೃದ್ಧರು ಮಾತ್ರ ಒಂದಲ್ಲಾ ಒಂದು ರೀತಿಯ ಸಮಸ್ಯೆಯಲ್ಲಿ ಸಿಕ್ಕಿಕೊಂಡಿರುತ್ತಾರೆ. ಇವರಿಗೆ ಮಾನಸಿಕ ನೆಮ್ಮದಿ ಇರುವುದಿಲ್ಲ. ಇವರು ಸಂಪೂರ್ಣವಾಗಿ ಪರಾವಲಂಭಿಗಳಾಗಿ ಜೀವನ ಸಾಗಿಸುತ್ತಾರೆ. ಒಬ್ಬೊಬ್ಬ ವೃದ್ಧರ ಜೀವನ ಮತ್ತೊಬ್ಬ ವೃದ್ಧರಿಗಿಂತ ವಿಭಿನ್ನತೆಯನ್ನು ಹೊಂದಿರುತ್ತದೆ. ಇವರಿಗೆ ವೃದ್ಧಾಪ್ಯ ವೇತನ ಪಡೆಯುವ ಸೌಲಭ್ಯವು ಸಹ ಅಧಿಕ ವೃದ್ಧರಿಗೆ ಆರ್ಥಿಕ ಭದ್ರತೆಯ ಕೊರತೆ, ವಸತಿ ಮುಂತಾದ ಅನೇಕ ಒಂದರಕ್ಕಿಂತ ಒಂದು ಸಮಸ್ಯೆಗಳನ್ನು ಎದುರಿಸಬೇಕಾಗಿರುತ್ತದೆ.

## ೨. ಪಿಂಚಣಿ ಸೌಲಭ್ಯ ಪಡೆಯುವ ವೃದ್ಧರು:

ಇವರು ಎಲ್ಲಾ ಜಾತಿ-ಧರ್ಮಗಳಲ್ಲಿ ಅಧಿಕವಾಗಿ ಕಂಡುಬರುವುದಿಲ್ಲ. ಕಡಿಮೆ ಪ್ರಮಾಣದಲ್ಲಿ ಸಿಗುತ್ತಾರೆ. ಜೀವನದುದ್ದಕ್ಕೂ ಸರಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತಿಯಾದ ಮೇಲೆ ಇವರಿಗೆ ಸಾಯುವ ತನಕ ಪಿಂಚಣಿ ಸೌಲಭ್ಯ ಮತ್ತು ಸರಕಾರದ ಇತರೆ ಭತ್ಯೆಗಳನ್ನು ಪಡೆಯುವ ಮೂಲಕ ಇವರು ಆರ್ಥಿಕವಾಗಿ ಸ್ಥಿತಿವಂತರಾಗುತ್ತಾರೆ. ಆದರೆ ಇವರಿಗೆ ಅಧಿಕವಾಗಿ ವಯಸ್ಸಾದಂತೆ ಕೆಲವೊಂದು ಸಮಸ್ಯೆಗಳು ಕಾಡುತ್ತವೆ. ಆರ್ಥಿಕವಾಗಿ ಗುಣಮಟ್ಟದವರಾದರು ಇವರು ಮತ್ತೊಬ್ಬರ ಅಥವಾ ಕುಟುಂಬದ ಇತರೆ ಸದಸ್ಯರ ರಕ್ಷಣೆ ಪಡೆಯಬೇಕಾಗುತ್ತದೆ. ಪಿಂಚಣಿ ಬರುತ್ತದೆ ಎನ್ನುವ ಕಾರಣಕ್ಕೆ ಇವರನ್ನು ರಕ್ಷಣೆ ಮಾಡುವ ಕೆಲವೊಂದು ಕುಟುಂಬಗಳು ಅಸ್ತಿತ್ವದಲ್ಲಿ ಕಂಡುಬರುತ್ತವೆ. ಅಥವಾ ಇವರ ಪಿಂಚಣಿಯನ್ನು ಅವಲಂಬಿಸಿ ಬದುಕನ್ನು ಸಾಗಿಸುವ ಕುಟುಂಬಗಳು ಸಹ ಅತ್ಯಲ್ಪ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತವೆ. ಪಿಂಚಣಿ ಸೌಲಭ್ಯವನ್ನು ಪಡೆಯುವುದರಿಂದ ಅವರಿಗೆ ಆಶ್ರಯ, ರಕ್ಷಣೆ, ಪಾಲನೆ, ಪೋಷಣೆ ಮುಂತಾದವುಗಳು ಮತ್ತು ಗೌರವ ಸಿಗುತ್ತವೆ ಹೊರತು ಕೆಲವೊಂದು ಕುಟುಂಬದಲ್ಲಿ ಕಲಹಗಳು ಬಂದಾಗ ಇವರು ಸಹ ಬೀದಿಪಾಲಿಗೆ ಬರುವ ಹಾಗೂ ಗುಡಿಗಳಲ್ಲಿ, ವೃಧ್ಯಾಶ್ರಮದಲ್ಲಿ, ಸನ್ಯಾಶ್ರಮಗಳಲ್ಲಿ ವಾಸಿಸುತ್ತಾರೆ.

## ೩. ವೃದ್ಧ್ಯಾಪ್ಯ ವೇತನ ಪಡೆಯುವ ವೃದ್ಧರು

'ನಮ್ಮ ದೇಶದಲ್ಲಿ ವೃದ್ಧರಿಗೆ ಕೊಡುವ ಅನೇಕ ರೀತಿಯ ಸಹಾಯಗಳಲ್ಲಿ ವೃದ್ಧಾಪ್ಯ ವೇತನ (ಓಲ್ಡ್ ಏಜ್ ಪೆನ್ಶನ್) ಮುಖ್ಯವಾದದ್ದು. ಇದು ಅರುವತ್ತರ ದಶಕದಲ್ಲಿ ಪ್ರಾರಂಭವಾಯಿತು. ಇದನ್ನು ಜಾರಿಗೊಳಿಸಿದ ಮೊದಲ ರಾಜ್ಯ ಉತ್ತರ ಪ್ರದೇಶ. ಅಲ್ಲಿ ಅರವತ್ತೈದು ವಯಸ್ಸು ತುಂಬಿದ ನಿರ್ಗತಿಕ ಮುದುಕರಿಗೆ ವೃದ್ಧಾಪ್ಯ ವೇತನ ಉಂಟು. ಮುಂದೆ ಪಶ್ಚಿಮ ಬಂಗಾಳ, ರಾಜಸ್ಥಾನ, ಕೇರಳ, ಪಂಜಾಬ, ಕರ್ನಾಟಕ ಮುಂತಾದ ರಾಜ್ಯಗಳು ಈ ಯೋಜನೆಯನ್ನು ಜಾರಿಗೆ ತಂದವು. ಕರ್ನಾಟಕವು ೧೯೬೫ ಜನವರಿಯಲ್ಲಿ ಇದನ್ನು ಜಾರಿಗೆ ತಂದಿತು.

ವೃದ್ಧಾಪ್ಯ ವೇತನವು ಸರಕಾರವೇ ತನ್ನ ಖಜಾನೆಯಿಂದ ಕೊಡುವ ಸಹಾಯ. ಇದಕ್ಕೆ ವೃದ್ಧರು ವಂತಿಕೆ ಕೊಡಬೇಕಾಗಿಲ್ಲ.

ವೃದ್ಧ್ಯಾಪ್ಯ ವೇತನೆ ಯೋಜನೆಯು ನಿರ್ಗತಿಕರಾದ ವೃದ್ಧರಿಗೆ ಒಂದು ವರದಾನದಂತೆ ಬಂದಿದೆ. ಕುಟುಂಬದ ರಕ್ಷಣೆ ಇಲ್ಲದೇ ಬೀದಿಪಾಲಾದ ಮುದುಕರು ಈ ನಗದು ಸಹಾಯದಿಂದ ಬದುಕಿಕೊಳ್ಳಬಹುದು. ಆದರೆ ಇಲ್ಲಿ ಒಂದೆರಡು ಮಾತುಗಳನ್ನು ಹೇಳಲೇಬೇಕು. ಸರಕಾರ ಕೊಡುವ ಸಹಾಯವು ಯಾವುದಕ್ಕೂ ಸಾಲದಷ್ಟು ಸಣ್ಣದು. ಉದಾಹರಣೆಗೆ ಪಶ್ಚಿಮ ಬಂಗಾಳದಲ್ಲಿ ಹಳ್ಳಿಗಳಲ್ಲಿರುವ ಮುದುಕರಿಗೆ ತಿಂಗಳಿಗೆ ಕೇವಲ ಹನ್ನೆರಡು ರೂಪಾಯಿ ಸಿಗುತ್ತದೆ. ನಗರದ ಮುದುಕರಿಗೆ ಹದಿನೈದು ರೂಪಾಯಿ ಕೊಡುತ್ತಾರೆ. ಕರ್ನಾಟಕದಲ್ಲಿಯೂ ಮೊದಲು ಮಾಸಿಕ ಸಹಾಯವು ಕೇವಲ ಹದಿನೈದು ರೂಪಾಯಿ ಇತ್ತು. ಸದ್ಯ ಇದನ್ನು ಐವತ್ತು ರೂಪಾಯಿಗಳಿಗೆ ಏರಿಸಿದ್ದಾರೆ. ಈ ಸಹಾಯದಿಂದ ಜೀವನ ನಡೆಸುವುದು ಎಷ್ಟು ಕಷ್ಟ ಎಂಬುದು ಎಲ್ಲರಿಗೂ ಗೊತ್ತಿರುವ ಮಾತು.

ಈ ಯೋಜನೆಯ ಇನ್ನೊಂದು ದೋಷವೆಂದರೆ ಬಹುತೇಕ ರಾಜ್ಯಗಳಲ್ಲಿ ವೃದ್ಧಾಪ್ಯ ವೇತನ ಪಡೆಯುವ ವಯಸ್ಸು ೭೦ ಎಂದು ಇತ್ತು. ಇದನ್ನು ಅರವತ್ತಕ್ಕೆ ಇಳಿಸುವುದು ಯೋಗ್ಯ ಎಂದು ಸರಕಾರಗಳಿಗೆ ಗೊತ್ತಿದೆ. ಆದರೆ ಹಾಗೆ ಮಾಡುವುದರಿಂದ ಅನೇಕ ಕೋಟಿ ರೂಪಾಯಿಗಳ ಖರ್ಚು ಬರುತ್ತದೆ. ಆದುದರಿಂದ ಸರಕಾರಗಳು ಸಹಾಯ ಪಡೆಯುವ ವಯೋಮಿತಿಯನ್ನು ಇಳಿಸಲು ಹೆದರುತ್ತವೆ. ಕರ್ನಾಟಕವು ಸದ್ಯ ೬೫ ವರ್ಷ ತುಂಬಿದ ಜನರಿಗೆ ವೃದ್ಧಾಪ್ಯ ವೇತನ ಕೊಡುತ್ತಿದೆ.[5]

## ೪. ವಿಧವಾ ವೇತನ ಪಡೆಯುವ ಮಹಿಳಾ ವೃದ್ಧರು

ಸರ್ಕಾರದ ಆರ್ಥಿಕ ಸಹಾಯಗಳಲ್ಲೊಂದಾದ ವಿಧವಾ ವೇತನ ಪ್ರಸ್ತುತವಾಗಿ ಕಾರ್ಯ ನಿರ್ವಹಿಸುತ್ತಿರುವುದು ಗಮನಾರ್ಹ ವಿಷಯವಾಗಿದೆ. ಈ ಯೋಜನಾ ಸಹಾಯವನ್ನು ವಿಧವಾ ಮಹಿಳೆಯರು ಪಡೆಯಬಹುದಾಗಿದೆ. ವೃದ್ಧರನ್ನು ಸಂರಕ್ಷಿಸಿಕೊಳ್ಳಲು ಸರಕಾರ, ಸಂಘ-ಸಂಸ್ಥೆಗಳು ಸಾಕಷ್ಟು ಪ್ರಮಾಣದಲ್ಲಿ ಸಹಾಯ ಮತ್ತು ಕೆಲವೊಂದು ಯೋಜನೆಗಳನ್ನು ಮೊದಲಿನಿಂದಲೂ ಜಾರಿಗೆ ತರಲಾಗಿದೆ. ಅಂತಹ ಯೋಜನೆಯಲ್ಲಿ ಸಂಧ್ಯಾ ಸುರಕ್ಷಾ ಯೋಜನೆ ಒಂದು ಪ್ರಮುಖವಾದುದು. ಈ ಯೋಜನೆ ಉದ್ದೇಶವು ಗಂಡನ ಮರಣದ ನಂತರ ಹೆಂಡತಿಯು ಆಶ್ರಯ ರಹಿತಳಾಗುತ್ತಾಳೆ. ಮತ್ತು ಪರಾವಲಂಬಿಯಾಗುತ್ತಾಳೆ. ೬೫ ವರ್ಷದ ಮಹಿಳೆಯರು ದುಡಿಯುವುದಕ್ಕೆ ಅಸಮರ್ಥರಾಗುತ್ತಾರೆ. ಇಂತಹ ಮಹಿಳೆಯರು ಈ ವಿಧವಾ ವೇತನ ಪ್ರಯೋಜನ ಪಡೆದುಕೊಂಡು ಸಮಾಜದಲ್ಲಿ ಸ್ವಾಭಿಮಾನಿಗಳಾಗಿ ಇತರ ಮಹಿಳೆಯರಂತೆ ಜೀವನ ಸಾಗಿಸುವುದಕ್ಕೆ ಅನುಕೂಲ ಮಾಡಿಕೊಟ್ಟಿದೆ. ಈ ಯೋಜನೆಯು ಎಲ್ಲಾ ಜಾತಿಯ ಮತ್ತು ಧರ್ಮದ ವೃದ್ಧ ವಿಧವಾ ಮಹಿಳೆಯರಿಗೆ ಮಾತ್ರ ಅನ್ವಯಿಸುತ್ತದೆ. ಸಮಾಜದಲ್ಲಿ ಮಹಿಳೆಯರು ಸಾಕಷ್ಟು ಪ್ರಮಾಣದಲ್ಲಿ ಪ್ರತಿಯೊಂದು ವಿಷಯದಲ್ಲಿ ಪ್ರಗತಿಯೊಂದಿದ್ದು, ಹಿಂದಿನ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಪ್ರಸ್ತುತ ಸಮಾಜದಲ್ಲಿ ಶಿಕ್ಷಣದ ಸದುಪಯೋಗ ಪಡೆದುಕೊಂಡು ಇತರ ಮಹಿಳೆಯರಂತೆ ಸಮಾಜದಲ್ಲಿ ಬದುಕು ಸಾಗಿಸಬಹುದಾಗಿದೆ. ಗ್ರಾಮಾಂತರ ಪ್ರದೇಶಗಳಲಿ ಸಂಧ್ಯಾ ಸುರಕ್ಷಾ ಯೋಜನೆಯು ಬಹಳಷ್ಟು ವೃದ್ಧ ವಿಧವಾ ಮಹಿಳೆಯರಿಗೆ ಸಿಗುತ್ತಿಲ್ಲ. ಹೆಚ್ಚಾಗಿ ಮಹಿಳೆಯರು ಮನೆಗೆಲಸ ಮತ್ತು ಹೊಲಗೆಲಸಗಳಲ್ಲಿ ತೊಡಗಿರುತ್ತಾರೆ. ತಮ್ಮ ಪತಿಯು ಅಕಾಲಿಕ ಮರಣ ಹೊಂದುವುದರಿಂದ ಹೆಂಡತಿಯು ದೈಹಿಕವಾಗಿ ಕುಗ್ಗುತ್ತಾಳೆ. ದುಡಿಯಲು ಅಸಮರ್ಥಳಾಗುತ್ತಾಳೆ. ೬೫ ವರ್ಷಕ್ಕೆ

ತನ್ನ ದೈಹಿಕ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಾರೆ. ಇದರಿಂದ ತನ್ನ ಮುಂದಿನ ಜೀವನದ ಚಿಂತೆಯಲ್ಲಿ ಮಗ್ನರಾಗಿರುತ್ತಾರೆ. ಇಂತಹ ಮಹಿಳೆಯರಿಗೆ ಈ ಯೋಜನೆಯನ್ನು ಜಾರಿಗೆ ತರಲಾಗಿದೆ. ಕೆಲವೊಂದು ಮಹಿಳೆಯರು ಸದುಪಯೋಗ ಮಾಡಿಕೊಂಡು ಅವಲಂಬನೆಯಾಗಿರುವುದು ಜೀವನ ಸಾಗಿಸುತ್ತಿದ್ದಾಳೆ. ಕೆಲವೊಂದು ಮಹಿಳೆಯರಿಗೆ ಈ ಯೋಜನೆಯು ತಲುಪುವುದಿಲ್ಲ. ಮಧ್ಯದಲ್ಲಿರುವ ಮಧ್ಯವರ್ತಿಗಳು ವಿಧವಾ ವೇತನದ ಹಣವನ್ನು ದುರ್ಬಳಿಕೆ ಮಾಡಿಕೊಂಡಿರುವುದು ಶೋಚನೀಯವಾಗಿದೆ.

## ವಯೋವೃದ್ಧರ ಬಗ್ಗೆ ಕುರಿತು ನಡೆದ ಅಧ್ಯಯನಗಳು:


'೧. ಅನುರಾಧ ಬಿ.ಆರ್. ಮತ್ತು ಪಿ.ಜೆ.ಪ್ರಕಾಶ; ೧೯೯೧; "ಲೈಫ್ ಸ್ಯಾಟಿಸ್ಫಕ್ಷನ್ ಇನ್ ರಿಲೇಷನ್ ಟೂ ಸೋಷಿಯಲ್ ಇಂಟ್ರಾಕ್ಷನ್ ಆ್ಯಂಡ್ ಲೋನ್ಲಿನೇಸ್ ಆಮಾಂಗದ ಎಲ್ಡರ್ಲಿ" ಕ್ವಾಲಿಟಿ ಎಜಿಂಗ್-ಕಲೆಕ್ಟ್ಡ್ ಪೇಪರ್ಸ್‌ರಲ್ಲಿ, ಪಿ.ಜಿ.ಪ್ರಕಾಶ (ಸಂ) ವಾರಣಾಸಿ, ಅಸೋಷಿಯೇಷನ್ಸ್ ಆಫ್ ಜೇರಿಯಂಟಾಲಜಿ (ಪುಟ ೧೫೦-೧೫೭)

೨. ಬರ್ಚ್ ಪಿ.ಆರ್.ಜೆ; ೧೯೬೮; ಆ್ಯನ್ ಇನ್‌ಕ್ವೈರಿ ಕನ್‌ಸರನಿಂಗ ಗ್ರೋಥ್ ದಿ ಸೇಸ್ ಆ್ಯಂಡ್ ಎಜೆಂಗ್ : ಓಲಿವರ್ ಆ್ಯಂಡ್ ಭೈಯ್ಡ್, ಇಡನ್‌ಬರ್ಲ್ಗ

೩. ಕಾರ್ಟ್ ಸಿ.ಎಸ್; ೧೯೮೧; "ರಿಯಾಲೀಟಿಸ್ ಆಫ್ ಎಜೀಂಗ್ ಆಲೈನ್ ಆ್ಯಂಡ್ ಬಾಕೊನ್ ಬಾಸ್ವನ", ಪಿ.ಎನ್.ಸಿ.

೪. ಅಚಂಬಾ ಬಿ; ೧೯೯೧; "ಟೈಂ ಜಡ್ಜ್‌ಮೆಂಟ್ಸ್ ಇನ್ ಯಂಗರ್ ಆ್ಯಂಡ್ ಒಲ್ಡರ್ ಪರಸಸ್ಸ್"

೫. ಹರಾಯ್ ಎಸ್. ೧೯೯೧; "ಎಜೆಂಗ್ ಆಫ್ ಫಾಪುಲೇಷನ್ ಆ್ಯನ್ ಇನ್‌ವೆಸ್ಟಿಗೇಷನ್ ಇನ್ ಇಂಡಿಯಾ ಕಂಟ್ರೀಸ್" ಕ್ವಾಲಿಟಿ ಎಜೆಂಗ್ ಕಲೆಕ್ಟಡ್ ಪೇಪರ್ಸ್, ಪಿ.ಜೆ.ಪ್ರಕಾಶ

(ಸಂ) ವಾರಣಾಸಿ ಅಸೋಷಿಯೇಷನ್ಸ್ ಆಫ್ ಜೇರಿಯಂಟಾಲಿಜಿ ಪು. ೧೯೬-೨೧೭.

೬. ದಂಡೇಕರ್ ಕುಮುದಿನಿ; ೧೯೯೬; "ದಿ ಎಲ್ಡರ್ಲಿ ಇನ್ ಇಂಡಿಯಾ ನ್ಯೂಡೆಲ್ಲಿ", ಸೇಜ್ ಪಬ್ಲೀಕೇಷನ್ಸ್

೭. ಸುರೇಂದ್ರನ್ ಪಿ.ಕೆ; ೧೯೯೪; ಪ್ಯಾಪುಲೇಷನ್ ಆಫ್ ಎಲ್ಡರ್ಲಿ ಇನ್‌ಕ್ರಿಸಿಂಗ್ ದ ಟೈಮ್ಸ್ ಆಫ್ ಇಂಡಿಯಾ ಸಾಟರಥೇ ಜೂನ್ ೨೫.

೮. ಗೀತಾಗೌರಿ ಆರ್.ಎ; ೧೯೮೯; ಸ್ಟಡಿ ಆನ್ ಸ್ಟೇಟಸ್ಸ್ ಕೇರ್ ಆ್ಯಂಡ್ ಪ್ರಾಬ್ಲಮ್ಸ್ ಆಫ್ ಎಲ್ಡರ್ಲಿ ರೂರಲ್ ವುಮೆನ್, ಆನ್ ಪಬ್ಲಿಷಿಡ್, ಎಂ.ಫಿಲ್. ಪ್ರಬಂಧ, ತಿರುಪತಿ ಎಸ್.ವಿ. ಯುನಿವರ್ಸಿಟಿ.

೯. ಸಿನ್ಹಾ ಕೆ.ಎನ್.; ೧೯೮೯; ಪ್ರಾಬ್ಲಮ್ಸ್ ಆಫ್ ಎಜೀಂಗ್, ನ್ಯೂಡೆಲ್ಲಿ ಕ್ಲಾಸಿಕಲ್ ಪಬ್ಲಿಸಿಂಗ್ ಕಾರ್ಪೋರೇಷನ್.

೧೦. ಸುಬ್ಬಾರಾವ್ ಕೆ. ಮತ್ತು ವಿ. ಪ್ರಭಾಕರ್; ೧೯೮೭; ಎಜೀಂಗ್ ಎ. ಮಲ್ಟಿಫಾಕ್ಟೋರಿಯಲ್ ಡಿಸ್ಕಸನ್ (ಸಂ), ವಾರಣಾಸಿ ಅಸೋಷಿಯೇಷನ್ ಆಫ್ ಜೀರಿಯಂಟಾಲಿಜಿ

೧೧. ಪ್ರಕಾಶ್ ಪಿ.ಜೆ.; (೧೯೯೧); ಕ್ವಾಲೀಟಿ ಎಜೀಮಗ್ ಕಲೆಕ್ಟಡ್ ಪೇಪರ್ಸ್, ವಾರಣಾಸಿ ಅಸೋಷಿಯೇಷನ್ ಆಫ್ ಜೀರಿಯಂಟಾಲಿಜಿ

೧೨. ಲಿಂಟ್ಸ್ ಎಫ್.ಎ.; "ಜೆನೆಟಿಕ್ಸ್ ಆ್ಯಂಡ್ ಎಜೀಂಗ್ ಇನ್ ಇಂಟರ್ ಡಿಸಿಪ್ಲಿನೆರಿ ಟಾಫಿಕ್ಸ್ ಇನ್ ಜೀರಿಯಂಟಾಲಿಜಿ" ಸಂಪುಟ–೧೪, ಬಾಸೆಲ್ ಕಾರಗಾರ

೧೩. ಈಶ್ವರಮೂರ್ತಿ ಎಂ.ಎ.; "ಸ್ಟಡಿ ಆನ್ ಅಡ್ಜಸ್ಟಮೆಂಟ್ ಇನ್ ರಿಲೇಷನ್ ಟೂ ಮಾರ್ಟೈಲ್ ಸ್ಟಡೀಸ್ ಅಮಾಂಗ್ ದಿ ರೂರಲ್ ಎಡ್ಜ್" ಕ್ವಾಲಿಟಿ ಎಜೀಂಗ್ ಕಲೆಕ್ಟಡ್ ಪೇಪರ್ಸ್ (ಎ.ಜೆ.ಪ್ರಕಾಶ) (ಸಂ) ವಾರಣಾಸಿ ಅಸೋಷಿಯೇಷನ್ ಆಫ್ ಜೀರಿಯಂಟಾಲಿಜಿ, ಪುಟ ೧೨೩–೧೩೪.

೧೪. ವಿಜಯಕುಮಾರ ಎಸ್; ೧೯೯೫ (ಸಂ); ಚಾಲೆಂಜ್‌ಸ್ ಬಿಫೋರ್ ದ ಎಲ್ಡರ್ಲಿ : ಆನ್ ಇಂಡಿಯನ್ ಸಿನಾರಿಯೊ ನ್ಯೂಡೆಲ್ಲಿ; ಎಮ್.ಡಿ. ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್.

೧೬. ವಿಜಯಕುಮಾರ ಎಸ್; ೧೯೯೧; ಫ್ಯಾಮಿಲಿ ಲೈಫ್ ಆ್ಯಂಡ್ ಸೋಶಿಯೋ ಎಕಾನಾಮಿಕ್ ಪ್ರಾಬ್ಲಮ್ಸ್ ಆಫ್ ದಿ ಎಜ್ಡ್ ನ್ಯೂಡೆಲ್ಲಿ, ಆಶಿಸ್ ಪಬ್ಲಿಷಿಂಗ್ ಹೌಸ್

೧೭. ಕಿನ್‌ಸೆಲ್ಲಾ ಕೆ.ಜಿ; ೧೯೯೪; "ಆನ್ ಎಜಿಂಗ್ ವರ್ಲ್ಡ್ ಪ್ಯಾಪುಲೇಷನ್ಸ್" ವರ್ಲ್ಡ್ ಹೆಲ್ಸ್ ೧೯೯೪; ಡಬ್ಲ್ಯೂಎಚ್.ಓ.[6]

## ಅಡಿ ಟಿಪ್ಪಣಿಗಳು

1. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ –08

2. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ –08/09

3. ಡಾ. ಕೆ. ಜಿ. ಗುರಮೂರ್ತಿ – ವೃದ್ಧಾಪ್ಯ : ಸಮಸ್ಯೆಗಳು ಹಾಗೂ ನಿವರಣೆಗಳು – 1999 ಪ್ರ. ಕರ್ನಾಟಕ ವಿ.ವಿ. ದಾರವಾಡ ಪು.ಸಂ –03/04

4. ಎಚ್. ವಿ. ನಾಗೇಶ್ – ವೃದ್ಧರು ಮತ್ತು ಅವರ ರಕ್ಷಣೆ 1986 – ಕರ್ನಾಟಕ ವಿ.ವಿ. ದಾರವಾಡ ಪು.ಸಂ – 05/06/07

5. ಎಚ್. ವಿ. ನಾಗೇಶ್ – ವೃದ್ಧರು ಮತ್ತು ಅವರ ರಕ್ಷಣೆ 1986 – ಕರ್ನಾಟಕ ವಿ.ವಿ. ದಾರವಾಡ ಪು.ಸಂ – 26/27/28.

# ಅಧ್ಯಾಯ 3

# ವಯೋವೃದ್ಧರ ಸ್ಥಿತಿಗತಿಗಳು

## 3.1 ಸಾಮಾಜಿಕ ಸ್ಥಿತಿಗತಿಗಳು

## 3.2 ಆರ್ಥಿಕ ಸ್ಥಿತಿಗತಿಗಳು

## 3.3 ಧಾರ್ಮಿಕ ಸ್ಥಿತಿಗತಿಗಳು

## 3.4 ದೈಹಿಕ ಅಥವಾ ಶಾರೀರಿಕ ಸ್ಥಿತಿಗತಿಗಳು

**ಪೀಠಿಕೆ :**

ನಾಗರೀಕ ಸಮಾಜದಲ್ಲಿ ಮನುಷ್ಯ ಮನುಷ್ಯರಲ್ಲಿ ಭಿನ್ನತೆಯನ್ನು ಎತ್ತಿ ತೋರಿಸುತ್ತದೆ. ಮನುಷ್ಯ ಸಮಾಜದಲ್ಲಿ ಕೆಲವೊಂದು ಮಹತ್ವದ ಘಟ್ಟಗಳನ್ನು ದಾಟಿ ಕೊನೆಗೆ ಮುಪ್ಪಿನ ಹಂತವನ್ನು ತಲುಪುತ್ತಾನೆ. ಈ ಮುಪ್ಪಿನ ಹಂತದಲ್ಲಿ ಅನೇಕ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ ಮತ್ತು ಅವನ ಸಮಾಜದ ಸ್ಥಿತಿಗತಿಗಳಲ್ಲಿ ಮತ್ತು ಮುಪ್ಪಿನ ವಯಸ್ಸಿನಲ್ಲಿ ಹಲವಾರು ಸ್ಥಿತಿಗತಿಗಳ ಬದಲಾವಣೆಗೆ ಗುರಿಯಾಗುತ್ತಾನೆ ಮತ್ತು ಅವನ ಜೀವನದ ಸ್ಥಾನಮಾನಗಳಲ್ಲಿ ಬದಲಾವಣೆ ಹೊಂದುವುದು ಅನಿವಾರ್ಯವಾಗಿರುತ್ತದೆ. ಕೆಲವೊಂದು ಸ್ಥಿತಿಗತಿಗಳಿಂದ ವೃದ್ದರು ಅನೇಕ ಸಮಸ್ಯೆಗಳನ್ನು ಎದುರಿಸಬೇಕಗುತ್ತದೆ.ವೃದ್ದರ ಸಮಸ್ಯೆಗಳು ಸ್ಥಿತಿಗತಿಗಳನ್ನು ಎತ್ತಿ ತೋರಿಸುತ್ತವೆ.ಅಂತಹ ಸ್ಥಿತಿಗತಿಗಳ ಅದ್ಯಾಯನ ಅವಶ್ಯಕವಾಗಿರುತ್ತದೆ.

**ಸಾಮಾಜಿಕ ಸ್ಥಿತಿಗತಿಗಳು**

ಮನುಷ್ಯ ಸಮಾಜಜೀವಿ ಸಮಾಜದಿಂದ ಬೇರ್ಪಟ್ಟು ಯಾವುದೇ ವ್ಯಕ್ತಿ ಬದುಕುವುದು ಕಷ್ಟ ಮತ್ತು ಅಸಾದ್ಯ. ಸಮಾಜದಲ್ಲಿ ವ್ಯಕ್ತಿ ಬಾಳಬೆಕಾದರೆ ಬದುಕಬೇಕಾದರೆ ಕೆಲವೊಂದು ರೂಢಿ ಸಂಪ್ರದಾಯ ರೀತಿ ನೀತಿಗಳನ್ನು ರೂಪಿಸಿಕೊಂಡು ಜೀವನ ನಡೆಸಬೇಕಾಗುವುದು.ಇಂತಹ ಸಮಾಜದಲ್ಲಿ ವಯೋವೃದ್ದರ ಸ್ಥಿತಿಗತಿಗಳನ್ನು ಕೇಳುವ ನಾಗರೀಕರ ತುಂಬಾ ಕಡಿಮೆ ಸಾಮಾಜಿಕವಾಗಿ ವಯೋವೃದ್ದರಿಗೆ ಸಮಾಜದಲ್ಲಿರುವ ಗೌರವ, ಹಿರಿಯರು ಎನ್ನುವ ಮನೋಭಾವನೆ ದಿನೇ ದಿನೇ ಕಡಿಮೆಯಾಗುತ್ತ ಬಂದಿರುತ್ತೆದೆ. ಪುರಾತನ ಕಾಲದಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಾಗಿ ಇರುವುದರಿಂದ ವಯೋವೃದ್ದರಿಗೆ ರಕ್ಷಣೆ, ಪಾಲನೆ, ಪೋಷಣೆ, ಗೌರವ ಮುಂತಾದವುಗಳು ದೊರಕುತಿದ್ದವು ಹಿಂದಿನ ಆಧುನಿಕತೆ ಸಮಾಜದಲ್ಲಿ ಸ್ವಾರ್ಥ ಮನೋಭಾವನೆಯಿಂದಾಗಿ ವೈಯಕ್ತಿಕ ಆಸೆ ಆಕಾಂಕ್ಷೆಗಳಿಂದ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳು ಪರಿವರ್ತನೆಗೊಂಡು ವೃದ್ದರಿನ್ನೂ ಅತಂತ್ರ ಸ್ಥಿತಿಗಳಿಗೆ ತಲುಪಿದ್ದಾರೆ.ಸಮಾಜದಲ್ಲಿ ವಯೋವೃದ್ದರು ಅತ್ಯಂತ ಕೆಳಮಟ್ಟದ ಸ್ಥಾನಮಾನಗಳಿಗೆ ಬಂದಿದ್ದಾರೆ. ತಮ್ಮ ಯೌವ್ವನಾವಸ್ತೆಯಲ್ಲಿ ಹೊಂದಿದ್ದ ಅಧಿಕಾರ ಘನತೆ, ಜವಾಬ್ದಾರಿ,

ಗೌರವಗಳನ್ನು ಕಳೆದುಕೊಂಡಿರುವ ವ್ಯಕ್ತಿಗಳು ಆಧುನಿಕ ಸಮಾಜದಲ್ಲಿ ಅಥವಾ ಸಂಬಂಧಗಳ ಸಂಕೀರ್ಣತೆಯನ್ನೇಎದುರಿಸಬೇಕಾಗುತ್ತದೆ. ಸಂಪಾದನೆ ಮಾಡುವ ಮಕ್ಕಳು ಆರ್ಥಿಕ ಸ್ವಾತಂತ್ರಗಳನ್ನು ಹೊಂದಿರುವದರಿಂದ ವೃದ್ದರು ಅವರ ಮೇಲೆ ತಮ್ಮ ಅಧಿಕಾರವನ್ನು ಚಲಾಯಿಸಲು ಸಾಧ್ಯವಗುವದಿಲ್ಲ. ಮಕ್ಕಳು ತಮ್ಮ ಎಲ್ಲಾ ಬಗೆಯ ಹಕ್ಕು ಅಧಿಕಾರಗಳನ್ನು ಕಸಿದುಕೊಂಡಿದ್ದಾರೆ ಎಂಬ ಭಾವನೆ ವೃದ್ದರಲ್ಲಿ ನಿರ್ಮಾಣ ವಾಗುತ್ತಿದೆ. ಇಂದು ಏರುತ್ತಿರುವ ಜನಸಂಖ್ಯೆಗೆ ಅನುಸಾರವಾಗಿ ಸಾಮಾಜಿಕ ರಕ್ಷಣೆಯ ಹೊಣೆಗಾರಿಕೆಯನ್ನು ನಿಭಾಯಿಸಲು ಪ್ರಚಾರಿತ ಸಾಮಾಜಿಕ ವ್ಯವಸ್ಥೆಗಳಿಗೆ ಸಾದ್ಯವಾಗುತ್ತಿಲ್ಲ. ಸಾಮಾಜಿಕ ಬದುಕಿನಲ್ಲಿ ಬಿಡುವಿಲ್ಲದ ಕೆಲಸ ಕಾರ್ಯಗಳ ನಿರ್ವಹಣೆಗೆ ವೃದ್ದರು ಅಡ್ಡಿಯಾಗುತ್ತಿದ್ದಾರೆ ಎಂಬ ಭಾವನೆ ಯುವ ಪೀಳಿಗೆಯಲ್ಲಿ ಹೆಚ್ಚುತ್ತಿದೆ. ಆದ್ದರಿಂದ ವೃದ್ದರು ಕುಟುಂಬಕ್ಕೆ ಬೇಡವಾಗುತ್ತಿದ್ದಾರೆ. ವೃದ್ಧ ವ್ಯಕ್ತಿಗಳು ಸಾಮಾಜಿಕವಾಗಿ ತಿರಸ್ಕೃತ ಜೀವಿಗಳಾಗಿ ಬದುಕಬೇಕಾಗಿದೆ. ಇವರು ಸ್ವಾತಂತ್ರವಾಗಿ ಜೀವಿಸಲು ಸಾದ್ಯವಿಲ್ಲದೆ ಬೇರೆಯವರ ಆಶ್ರಯ ಹಾರೈಕೆಯಲ್ಲಿ ಬದುಕಬೇಕಾಗಿರುತ್ತಿದೆ.ಇವರು ಇರುವ ಕಡೆ ಬಹಳ ಮಟ್ಟಿಗೆ ಪೀಳಿಗೆಗಳ ಅಂತರದ ಕಾರಣದಿಂದಾಗಿ ವೈಮನಸ್ಸು, ಘರ್ಷಣೆ, ಮನೆಬಿಟ್ಟು ಹೋಗುವುದು ಸಂಭವಿಸುತ್ತವೆ. ಬಿಕ್ಷೆ ಬೇಡಿ ಬದುಕುವುದು ನಿರಪಯುಕ್ತ ಪ್ರಜೆಯಾಗಿ ಇಡೀ ಸಮಾಜಕ್ಕೆ ಹೊರೆಯಾಗಿ ಅಷ್ಟೇನೂ ಪ್ರಾಮುಖ್ಯತೆಯಿಲ್ಲದೆ, ದಿನದಿನಕ್ಕೆ ದೈಹಿಕ ಹಾಗೂ ಮಾನಸಿಕವಾಗಿ ನೊಂದುಬೆಂದು ಹೆಚ್ಚು ಹೆಚ್ಚು ಅಶಕ್ತರಾಗಿ ಬದುಕಬೇಕಾಗುತ್ತಿದೆ. ಆಧುನಿಕ ಸಮಾಜದಲ್ಲಿ ವಯೋವೃದ್ದರಿಗೆ ರಕ್ಷಣೆಯಿಲ್ಲದೆ ಸಾಮಾಜಿಕ ಭದ್ರತೆ ಇರದೆ ಜೀವನವನ್ನು ಸಾಗಿಸ ಬೇಕಾಗುತ್ತಿದೆ. ರಾತ್ರಿ ವೇಳೆಯಲ್ಲಿ ( ನಿದ್ದೆಇಲ್ಲದೆ ಅಥವಾ) ವಯೋವೃದ್ದರಿಗೆ ಸೂಕ್ತ ರಕ್ಷಣೆ ಸಿಗದೆ, ಪರದಾಡಬೇಕಾಗಿರುತ್ತದೆ. ದಿನವಿಡಿ ಬಿಕ್ಷೇಬೇಡಿ ರಾತ್ರಿಯಲ್ಲಿ ಯಾವುದಾದರೊಂದು ಸ್ಥಳದಲ್ಲಿ ವಿಶ್ರಾಂತಿ ಪಡೆಯಬೇಕೆಂದರೆ ವಯೋವೃದ್ದರು ವಿಶ್ರಾಂತಿಗೆ, ಭಗ್ನ ತರುವಂತಹ ಇಲಾಖೆಗಳು ಮತ್ತು ಕಾನೂನು ಸಹ ವಯೋವೃದ್ದರ ಸಾಲಿಗೆ ಶಾಪವಾಗಿರುತ್ತವೆ. ಬಸ್ಸು ನಿಲ್ದಾಣ, ಗುಡಿಗಳು ರೈಲ್ವೆ ನಿಲ್ದಾಣ ಮುಂತಾದ ಸ್ಥಳಗಳು ವಯೋವೃದ್ದರ ವಿಶ್ರಾಂತಿ ತಾಣವಾಗಿದ್ದರೂ, ಪೋಲಿಸ್ ಇಲಾಖೆಯ ರಾತ್ರಿಗಸ್ತು ತಿರುಗುತ್ತಿರುವ ಪೇದೆಗಳು, ಮೇಲಾಧಿಕಾರಿಗಳು ಇವರಿಗೆ ರಕ್ಷಣೆ ನೀಡದೆ, ಇವರ

ವಿಶ್ರಾಂತಿಗೆ ಭಗ್ನವನ್ನುಂಟು ಮಾಡುತ್ತಾರೆ. ಧಾರ್ಮಿಕವಾಗಿ ಗುಡಿಗಳಲ್ಲಿ ಇವರಿಗೆ ರಕ್ಷಣೆ ಇಲ್ಲದಂತಾಗಿರುತ್ತದೆ. ನಾಗರಿಕ ಸಮಾಜದಲ್ಲಿ ವೃದ್ದರಿಗೆ ರಕ್ಷಣೆ ಇಲ್ಲದಂತಹ ಒಂದು ಸಾಮಾಜಿಕ ವ್ಯವಸ್ಥೆ ಕಂಡು ಬರುವುದು ಸತ್ಯ. ಒಟ್ಟಿನಲ್ಲಿ ವಯೋವೃದ್ದರಿಗೆ ಸಾಮಾಜಿಕ ಸ್ಥಿತಿ, ಗತಿಗಳು ಒಂದು ಶಾಪವಾಗಿದೆ. ಪ್ರಾಚೀನ ಕಾಲದಲ್ಲಿ ಒಬ್ಬ ವ್ಯಕ್ತಿಗೆ ಸಮಾಜದಲ್ಲಿ ಒಂದು ಉತ್ತಮ ಸ್ಥಾನಮಾನ ದೊರೆಯಬೇಕಾದರೆ ವ್ಯಕ್ತಿಯ ನಡತೆ, ಮನೆತನ, ಹಿರಿತನ, ಮುಂತಾದವುಗಳಿಂದ ಗುರುತಿಸಲ್ಪಟ್ಟಿರುತ್ತಿದ್ದರು. ಪ್ರಸ್ತುತ ಸಮಾಜದಲ್ಲಿ ವ್ಯಕ್ತಿಗಳಿಗೆ ಗೌರವ-ಸ್ಥಾನಮಾನ ನೀಡಬೇಕಾದರೆ ಅಥವಾ ದೊರೆಯಬೇಕಾದರೆ ಅವನಲ್ಲಿರುವ ಕೆಲವೊಂದು ಸ್ಥಿತಿಗತಿಗಳನ್ನು ಅವಲಂಬಿಸಿರುತ್ತಾರೆ. ಆರ್ಥಿಕ ಸ್ಥಿತಿವಂತರಾದವರಿಗೆ ಬೇರೆ ಗೌರವ ಸಕ್ಕರೆ ಧಾರ್ಮಿಕ ಸ್ಥಿತಿ ಗತಿಗಳಲ್ಲಿದ್ದ ವ್ಯಕ್ತಿಗಳಿಗೆ ಬೇರೆ ಸ್ಥಾನಮಾನ ಕಲ್ಪಿಸಿಕೊಡಲಾಗಿದೆ ಈ ಎಲ್ಲಾ ಸ್ಥಿತಿಗತಿಗಳು ಒಂದಲ್ಲ ಒಂದು ರೀತಿಯ ವೃದ್ಧರ ಸ್ಥಾನ ಮಾನಗಳಲ್ಲಿ ಬದಲಾವಣೆಯನ್ನು ಉಂಟುಮಾಡಿರುತ್ತವೆ. ಸಮಾಜದಲ್ಲಿ ಸಾಮಾಜಿಕವಾಗಿನ ವೃದ್ಧರು ಎದುರಿಸುವ ಸಮಸ್ಯೆಗಳ ಮತ್ತು ಅವರ ಸ್ಥಿತಿ ಗತಿಗಳ ಕುರಿತು ಅದ್ಯಾಯನದ ಅವಶ್ಯಕತೆ ಇರುತ್ತದೆ. ಮತ್ತು ವಯೋವೃದ್ಧರ ಸಾಮಾಜಿಕ ಸ್ಥಿತಿ ಗತಿಗಳಿಗೆ ಕಾರಣವಾದ ಅಂಶಗಳನ್ನು ಪರಿಶೀಲಿಸ ಬಹುದಾಗಿದೆ.

**1) ಸಾಮಾಜಿಕ ರಕ್ಷಣೆ ಇಲ್ಲದಿರುವುದು.**

ಮನುಷ್ಯನಿಗೆ ಪ್ರತಿಯೊಂದು ಕ್ಷೇತ್ರದಿಂದ ಅಂದರೆ ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಮತ್ತುಶೈಕ್ಷಣಿಕವಾಗಿ, ರಕ್ಷಣೆಯ ಅವಶ್ಯಕತೆ ಇರುವುತ್ತಿದೆ. ಅದರಲ್ಲೂ ವಯೋವೃದ್ದರಿಗೆ ರಕ್ಷಣೆಯು ತುಂಬ ಅವಶ್ಯಕ ಪ್ರಾಚೀನ ಕಾಲದಲ್ಲಿ ಅವಿಭಕ್ತ ಕುಟುಂಬಗಳು ವೃದ್ದರನ್ನು ರಕ್ಷಣೆ ಮಾಡುತ್ತಿದ್ದರು. ಪ್ರಸ್ತುತವಾಗಿ ಸಮಾಜವು ತೀವ್ರಗತಿಯ ಬದಲಾವಣೆ ಹೊಂದುತ್ತಿರುವುದರಿಂದ ವೃದ್ದರಿಗೆ ಯಾವದೇ ರೀತಿಯ ರಕ್ಷಣೆ ಇಲ್ಲದಂತಹವಾಗಿದೆ. ಇದರಿಂದ ಆಧುನಿಕ ಸಮಾಜದಲ್ಲಿ ವೃದ್ದರ ರಕ್ಷಣೆ ಮತ್ತು ಅವರ ಏಳಿಗೆಗಾಗಿ ಪ್ರಯತ್ನ ಪಡುವುದು ಉಪಯುಕ್ತವಾದ ವಿಷಯವಾಗಿದೆ. ಸಮಾಜದಲ್ಲಿ ವಯೋವೃದ್ದರು ತಮ್ಮನ್ನು ಸಂರಕ್ಷಿಸಿಕೊಳಲು ಯಾವದೇ ಒಂದು ಆಶ್ರಯ ಇಲ್ಲದೆ ಒಂದು ಪ್ರದೇಶದಿಂದ ಮತ್ತೋಂದು

ಪ್ರದೇಶಕ್ಕೆ ನಿರಂತರವಾಗಿ ವಲಸೆ ಹೊಂದುತ್ತಲೇ ಬಂದಿರುತ್ತಾರೆ. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೊಂದಿಕೊಳಲಾರದೆ ವಾತಾವರಣದ ಬದಲಾವಣೆಯಿಂದ ಅನೇಕ ಕಾಯಿಲೆಗಳಿಗೆ ತುತ್ತಾಗಿರುತ್ತಾರೆ. ಸಮಾಜವು ವೃದ್ದರಿಗಾಗಿ ಒಂದು ಶಾಶ್ವತನೆಲೆಯನ್ನು ನೀಡದೆ ವೃದ್ದರ ಬದುಕು ಹೀನಾಯಸ್ಥಿತೆಗೆ ತಂದು ನಿಲ್ಲಿಸಿರುತ್ತದೆ.ಇದರಿಂದ ಸಮಾಜದಲ್ಲಿ ವೃದ್ದರಿಗೆ ಯಾವುದೇ ರೀತಿಯ ರಕ್ಷಣೆ ಯಿಲ್ಲದಿರುದು ಒಂದು ಶೋಚನೀಯ ಸಂಗತಿಯಾಗಿದೆ.

**2) ವಿಶ್ರಾಂತಿ ಗೃಹಗಳ ಕೊರತೆ.**

ಮನುಷ್ಯ ಸಮಾಜದಲ್ಲಿ ಒಂದಲ್ಲ ಒಂದು ರೀತಿಯ ಕಾರ್ಯದಲ್ಲಿ ಕಾಯಕದಲ್ಲಿ ನಿರಂತರಾಗಿರುತ್ತಾನೆ. ನಂತರ ರಾತ್ರಿಯ ಹೊತ್ತಿಗೆ ವಿಶ್ರಾಂತಿಗಾಗಿ ಕುಟುಂಬ ಮತ್ತು ಗೃಹಗಳನ್ನು ಅವಲಂಬಿಸಿರುತ್ತಾನೆ. ಪ್ರಾಚೀನ ಕಾಲದಲ್ಲಿ ವೃದ್ದರು ಕುಟುಂಬ ವ್ಯವಸ್ಥೆಯಲ್ಲಿ ವಿಶ್ರಾಂತಿ ಮತ್ತು ಮಾನಸಿಕ ನೆಮ್ಮದಿ ದೊರಕುತ್ತಿದ್ದವು. ಸಮಾಜದಲ್ಲಿ ಬದಲಾವಣೆಯು ವೃದ್ದರಿಗೆ ಒಂದು ಶಾಪವಾಗಿದೆ. ದಿನನಿತ್ಯ ಬಿಕ್ಷೆಬೇಡಿ ಮತ್ತು ತಮ್ಮ ಕೈಲಾದ ಉದ್ಯೋಗದಲ್ಲಿ ದುಡಿದು ರಾತ್ರಿಯ ವೇಳೆಗೆ ಯಾವುದೇ ವಿಶ್ರಾಂತಿಗಳು ಇಲ್ಲದೆ ಪುಟ್‌ಪಾತ್, ದೇವರಗುಡಿ, ಬಸ್ ನಿಲ್ದಾಣ, ಮುಂತಾದ ಕಡೆಗಳಲ್ಲಿ ವಿಶ್ರಾಂತಿ ಪಡೆಯುವಂತಹ ಪರಿಸ್ಥಿತಿ ಬಂದಿರುತ್ತದೆ. ಸರಕಾರ ಅದೆಷ್ಟೊ ಹಣವನ್ನು ಯಾವುದೊ ಯೊಜನೆಗಾಗಿ ಬಳಸುತ್ತಾರೆ. ಸ್ವಚ್ಛತೆಗಾಗಿ ಶೌಚಾಲಯ ನಿರ್ಮಾಣ, ಮೂತ್ರ ವಿಸರ್ಜನೆಗಾಗಿ ಅನುದಾನ ಬಿಡುಗಡೆ ಮಾಡುತ್ತಾರೆ. ಈ ಯೋಜನೆಗಳು ಅದೆಷ್ಟೊ ಅಧಿಕಾರಿಗಳು ಭ್ರಷ್ಟಚಾರ ವ್ಯಸಗುತ್ತಾರೆ, ಅವ್ಯವರದಂತಹ ಪ್ರಕರಣದಲ್ಲಿ ಭಾಗಿಯಾಗುತ್ತಾರೆ. ಕುಟುಂಬದಿಂದ ಹೊರಹಾಕಲ್ಪಟ್ಟರು ಅದೆಷ್ಟೊ ವೃದ್ದರು ಬೀದಿಪಾಲಿಗೆ ಬೀದಿಯಲ್ಲಿ ಕಾಲಕಳೆಯುವಂತಹದಾಗಿದೆ. ಇಂತಹ ವಯೋವೃದ್ದರಿಗಾಗಿ ರಾತ್ತಿಯ ವೇಳೆಯಲ್ಲಿ ನೆಮ್ಮದಿಯಿಂದ ವಿಶ್ರಾಂತಿ ಪಡೆಯುವಂತೆ ಮಾಡಬೇಕಾಗಿರುತ್ತದೆ. ಸಂಘ, ಸಂಸ್ಥಗಳೂ, ಸರಕಾರ, ಮತ್ತು ಶ್ರಿಂಮಂತ ಧಾನಿಗಳು ವೃದ್ದರ ಸಮಸ್ಯಗಳಿಗೆ ಸ್ಪಂದಿಸುವ ಪ್ರತಿಯೋಬ ಪ್ರಜೆಯು ವೃದ್ದರ ರಕ್ಷಣೆಗೆ ಮುಂದಾಗಬೇಕಾಗಿದೆ. ಅವರಿಗೆ " ನಾಳೆಯು ನಿಮ್ಮ ಪಾಲಿಗೆ ಇದೆ" ಎನ್ನುವುದನ್ನು ತೋರಿಸಬೇಕಾಗಿದೆ. ಅದಕ್ಕಾಗಿ ಪ್ರತಿ ತಾಲ್ಲುಕಿನಲ್ಲಿ ಕನಿಷ್ಠ ಪಕ್ಷ ಮೂರದಾರು ವಿಶ್ರಾಂತಿ ಗೃಹಗಳನ್ನು ನಿರ್ಮಿಸುವುದು. ಅಗತ್ಯವಾಗಿದೆ ವೃದ್ದರು ಕೂಡಾ ನಮ್ಮದೇಶದ ಆಸ್ತಿ .

**3) ಕುಟುಂಬದಿಂದ ದೂಕಲ್ಪಟ್ಟಿರುವವರು.**

ಸಮಾಜದಲ್ಲಿ ಎಷ್ಟೋ ವಯೋವೃದ್ದರಿಗೆ ಯಾವುದೇ ಭದ್ರತೆ ಇಲ್ಲದಿರುವುದು ಕಂಡು ಬರುವುದು ಸರ್ವೇಸಾಮಾನ್ಯ ರಕ್ಷಣೆಯು ಒದಗಿಸುವಲ್ಲಿ ಈ ಸಮಾಜದ ಪ್ರತಿಯೊಬ್ಬ ಜೀವಿಪಾಲಾಗಿರುತ್ತದೆ. ಅಂತಹದರಲ್ಲಿ ವಯೋವೃದ್ದರನ್ನು ಅವರೇ ಮಕ್ಕಳೆ ಸ್ವತಃ ಮನೆಯಿಂದ ಹೊರ ಹಾಕುವುದು ಒಂದು ಶೋಚನೀಯ ಸಂಗಾತಿಯಾಗಿದೆ ಇಂತಹ ಕುಟುಂಬಗಳು ಪ್ರಸ್ತುತವಾಗಿ ಕಂಡುಬರುತ್ತದೆ. ಇದರಿಂದ ವಯೋವೃದ್ದರು ಮಕ್ಕಳ ಮಮತೆಯಿಂದ ವಂಚಿತರಾಗಿರುವುದಿಲ್ಲ ಆಶ್ರಯರಹಿತರಾಗಿವುದರ ಜೊತೆಗೆ ವಸತಿ ರಹಿತರಾಗಿರುತ್ತಾರೆ.ತಮ್ಮ ನಿತ್ಯ ಜೀವನದ ಬದುಕನ್ನು ನರಕಯಾತನೆಯಿಂದ ಸಾಗಿಸುವುರು.ಒಂದು ದೃಶ್ಯಗಳಾಗಿವೆ.ಇದರಿಂದ ವೃದ್ದರು ಒಂದು ಸಮಸೆಯಲ್ಲ ಅನೇಕ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ್ದಾರೆ. ವೃದ್ದರು ನಮಗೆ ಆಶ್ರಯ ನೀಡುವವರು ಯಾರು? ವಸತಿ ಸೌಲಭ್ಯವನ್ನು ಒದಗಿಸುವರ್ಯಾರು ಯಾರು? ನಮ್ಮ ಕಷ್ಟಗಳಿಗೆ, ಸಮಸ್ಯೆಗಳಿಗೆ ಸ್ಪಂದಿಸುವವರು ಯಾರು? ನಮ್ಮ ಸಮಸ್ಯೆಗಳಿಗೆ ಶಾಶ್ವತ ಪರಿಹಾರಗಳು ಎಂದು? ಎನ್ನುವ ಹಲವಾರು ಸಮಸ್ಯೆಗಳಿಂದ ನಿತ್ಯ ಜೀವನ ಸಾಗಿಸುತ್ತಾರೆ. ಇಂತಹ ಒಂದು ಆಧುನಿಕ ಸಮಾಜದಲ್ಲಿ ಸಾಮಾಜಿಕ ಸ್ಥಿತಿಗತಿಗಳಲ್ಲಿ ವಯೋವೃದ್ದರು ಅನೇಕ ಕುಟುಂಬಗಳಿಂದ ಹೊರದೂರಲ್ಪಟ್ಟಿರುತ್ತಾರೆ. ಇವರಿಗೆ ವಸತಿಯ ಸಮಸ್ಯೆಯು ಪರಿಣಾಮಕಾರಿಯಾಗಿದೆ.

**4) ರಕ್ಷಣೆ, ಪಾಲನೆ, ಪೋಷಣೆ, ನೆಮ್ಮದಿ ಇಲ್ಲದಿರುವುದು.**

ಸಂಪ್ರದಾಯ ಕುಟುಂಬ ವ್ಯವಸ್ಥೆಯಲ್ಲಿ ವೃದ್ದರು ಉತ್ತಮ ರಕ್ಷಣೆ ಹೊಂದಿದ್ದರು ಪ್ರಾಚೀನಕಾಲದ ಕುಟುಂಬ ವ್ಯವಸ್ಥೆಯು ರೂಢಿ, ಸಂಪ್ರದಾಯ,ಆಚಾರ, ವಿಚಾರಗಳನ್ನು ಒಳಗೊಂಡಿರುತ್ತಿದ್ದು ಕಾಲಾನುಕ್ರಮದಲ್ಲಿ ಬದಲಾವಣೆಯ ನಂತರ ವೃದ್ದರಿಗೆ ಕುಟುಂಬ ವ್ಯವಸ್ಥೆಯಲ್ಲಿ, ಸಮಾಜದ ವ್ಯವಸ್ಥೆಯಲ್ಲಿ ರಕ್ಷಣೇಯು ಹಂತ ಹಂತವಾಗಿ ಕಡಿಮೆಯಾಗ ತೊಡಗಿತು. ಇದು ಸಮಾಜದಲ್ಲಿ ಗಂಭೀರ ಸ್ವರೂಪವನ್ನು ಪಡೆದುಕೊಂಡಿರುತ್ತದೆ. ಇದು ಆಧುನಿಕ ಸಮಾಜದಲ್ಲಿ ಸಂಪೂರ್ಣವಾಗಿ ನಿರ್ಮೂಲನೆಯಾಗಿದೆ. ವೃದ್ದರಿಗರ ಬರಕ್ಷಣೇ ಒದಗಿಸಲಾರದಂತಹ ಒಂದು ಪರಿಸ್ಥಿತಿ ಬಂದಿರುತ್ತದೆ. ಪಾಲನೆಯಂತೂ

ಮೊದಲೇಮಾಯವಾಗಿದೆ. ಯಾವಾಗ ಈ ವೃದ್ದರು ಅಥವಾ ವೃದ್ದರಾ ತಂದೆ ತಾಯಿಗಳು ಸಾಯುತಾರೆ, ಯಾವಾಗ ಮನೆಬಿಟ್ಟು ಹೋಗುತ್ತಾರೆ, ಗುಣಗಾಡುವುದು ಸಾಮನ್ಯ ವಿಷಯ ಇಂತಹ ವೃದ್ಧ ತಂದೆ ತಾಯಿಗಳನ್ನು ಸರಿಯಾಗಿ ಪೋಷಣೆ ಮಾಡದಿರುವುದು, ಬಟ್ಟೆಗಳನ್ನು ಕೊಡದಿರುವುದು, ಗುಣಮಟ್ಟದ ಆಹಾರವನ್ನು ನೀಡದಂತಹ ಮಕ್ಕಳ ಜೀವಂತವಾಗಿರುವ ತಂದೆ ತಾಯಿಗಳನ್ನು ನಿರ್ದಕ್ಷಣೆಯಾಗಿ ಕೊಲೆ ಮಾಡುವರು ಇದ್ದಾರೆ ಜನ್ಮ ನೀಡಿದ ತಂದೆ ತಾಯಿಗಳನ್ನು ತಂದೆ-ತಾಯಿ ಎಂದು ಒಪ್ಪಿಕೊಳ್ಳಲಾರದಂತಹ ಮಕ್ಕಳಿರುತ್ತಾರೆ ಇದು ಆಧುನಿಕ ಸಮಾಜದ ಒಂದು ವ್ಯವಸ್ಥೆ ಯಾಗಿದೆ ಇಂತಹ ಹಲವಾರು ಸಮಸ್ಯೆಗಳು ಎದುರಿಸುತ್ತ ಮಾನಸಿಕ ನೆಮ್ಮದಿಯ ಜೀವನ ಸಾಗಿಸುವುದಕ್ಕೆ ಅವಕಾಶ ಇಲ್ಲದಂತೆ ನೊಂದುಬೆಂದು ಮುಂದಿನ ಮುಪ್ಪಿನ ಜೀವನದ ಕೊನೆಯ ಕ್ಷಣಗಳನ್ನು (ಈ ಸಮಾಜ ಅವಕಾಶ) ಕಳೆಯುವಂತಹದಾಗಿರುತ್ತದೆ. ಇಂತಹ ಹಲವಾರು ಸಮಸ್ಯೆಗಳನ್ನು ಎದುರಿಸಲಾರದೇ ಜೀವಂತ ಶವಗಳಂತೆ ಜೀವನ ಸಾಗಿಸುವರಾಗಿರುತ್ತಾರೆ.

### ☆ ಆರ್ಥಿಕ ಸ್ಥಿತಿಗತಿಗಳು

ವಯಸ್ಸಾದಂತೆ ವೃದ್ದರಿಗೆ, ಆರ್ಥಿಕತೆ ಒಂದು ಪ್ರಬಲವಾದ ಸಮಸ್ಯೆಯಾಗಿ ಕಾಡತೊಡುಗುತ್ತಿದೆ. ಮೊದಲೇ ವೃದ್ದರು ಎನ್ನುವ ಕೀಳು ಹಿರಿಮೆ ಹೊಂದಿದ ವೃದ್ದರು ಆರ್ಥಿಕ ಸಮಸ್ಯೆಗೆ ಸಿಲುಕಿ ತಮ್ಮ ದಿನ ನಿತ್ಯದ ಜೀವನ ಸಾಗಿಸುವುದಕ್ಕೆ ಕಷ್ಟಪಡುತ್ತಾರೆ. ಸಮಾಜದಲ್ಲಿ ಕೆಲವೊಂದು ವೃದ್ದರು 60ಕ್ಕಿಂತ ಮೇಲ್ಪಟ್ಟು ವಯಸ್ಸಾದಂತೆ ದೈಹಿಕವಾಗಿ ದುಡಿಯುವ ಸ್ವಲ್ಪ ಪ್ರಮಾಣದಲ್ಲಿ ಶಕ್ತರಾಗಿರುತ್ತಾರೆ. ಆದರೆ ಕೆಲವೊಂದು ವೃದ್ದರು, ದೈಹಿಕ ಮತ್ತು ಶಾರೀರಿಕ ಬಲ ಹೀನತೆಯಿಂದ ದುಡಿದು ಜೀವನ ಸಾಗಿಸುವದಕ್ಕೆ ಅಶಕ್ತರಾಗಿರುತ್ತಾರೆ. ಇಂತಹ ವೃದ್ದರ ಆರ್ಥಿಕ ಸ್ಥಿತಿಗತಿಗಳು ಶೋಚನೀಯ ಸಂಗತಿಗೆ ಸಿಲುಕಿ ಬಿಕ್ಷೆ ಬೇಡುವುದು, ಒಂದು ಪ್ರವೃತ್ತಿಯನ್ನಾಗಿ ಮಾಡಿಕೊಂಡಿರುತ್ತಾರೆ. ಆರ್ಥಿಕ ಸ್ಥಿತಿಯಿಂದ ಹಿಂದಕ್ಕೆ ಬಿದ್ದಿರುವ ಮತ್ತು ಅತ್ಯಂತ ಕೆಳಮಟ್ಟದ ಸ್ಥಾನಮಾನಕ್ಕೆ ಆರ್ಥಿಕ ಸ್ಥಿತಿಗತಿ ಒಂದು ಪ್ರಬಲವಾದ ಕಾರಣವಾಗಿರುತ್ತಿದೆ. ಕುಟುಂಬದ ಸದಸ್ಯರ ಬೇರ್ಪಟ್ಟು ಇವರು ಮನೆತೊರೆದು ತಮ್ಮ ನಿತ್ಯ

ಜೀವನ ಸಾಗಿಸುವುದಕ್ಕೆ ಯಾವುದೇ ಉದ್ಯೋಗವಿಲ್ಲದೆ, ಆಶ್ರಯವಿಲ್ಲದೆ, ಕೇವಲ ಸಾವು ಬದುಕಿನ ಮಧ್ಯದಲ್ಲಿ ಹೋರಾಟ ಮಾಡುವ ಪ್ರಸಂಗವು ಇಂದಿನ ಆಧುನಿಕ ಸಮಾಜದಲ್ಲಿ ಎದ್ದು ಕಾಣುವಂತಹ ವಾತಾವರಣ ನಿರ್ಮಾಣವಾಗಿದೆ. ಸಮಾಜದಲ್ಲಿ ಒಬ್ಬ ವ್ಯಕ್ತಿಯನ್ನು ಗೌರವದಿಂದ ಕಾಣಬೇಕಾದರೆ ವ್ಯಕ್ತಿಯ ಮಾನವೀಯತೆಯ ಮೌಲ್ಯಗಳಿಂದ ಅಲ್ಲ ಅವನಲ್ಲಿರುವ ಆರ್ಥಿಕತೆಯಿಂದ ಎನ್ನುವುದು ಕೆಲವರ ಅಭಿಪ್ರಾಯವಾಗಿರುತ್ತಿದೆ. ಕೆಲವೊಂದು ಸರಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿಯು ತಮ್ಮ ಸೇವಾವಧಿಯಲ್ಲಿ ತನ್ನ ಮುಂದಿನ ಉಪ ಜೀವನಕ್ಕಾಗಿ ಸ್ವಲ್ಪ ಪ್ರಮಾಣದಲ್ಲಿ ಹಣವನ್ನು ಕೂಡಿಹಿಡುವುದು, ಮತ್ತು ನಿವೃತ್ತಿಯಾದ ಮೇಲೆ ಪಿಂಚಿಣಿ ಸೌಲಭ್ಯವನ್ನು ಪಡೆಯುವುದರಿಂದ ಪಿಂಚಣಿದಾರರ ಆರ್ಥಿಕತೆ ಗುಣಮಟ್ಟದಾದರೂ ಉದ್ಯೋಗವಿಲ್ಲದವರ ಆರ್ಥಿಕತೆ ಶೋಚನೀಯ ಪ್ರಸಂಗಕ್ಕೆ ತುತ್ತಾಗಿರುತ್ತಾರೆ. ವೃದ್ದರು ಹೆಚ್ಚಾಗಿ ಪರಾವಲಂಬಿಗಳಾಗಿ ಜೀವನ ಸಾಗುವುದು. ಅಲ್ಲದೇ ಅವರಿಗೆ ಬೇಕಾಗಿರುವ ಕೆಲವೊಂದು ಬೇಡಿಕೆಗೆ ಮಕ್ಕಳ ಆರ್ಥಿಕತೆಯನ್ನು ಅವಲಂಬಿಸಿರುತ್ತಾರೆ. 'ವೃದ್ಧರ ವೃದ್ಧಾಪ್ಯ ವ್ಯವಸ್ಥೆಯಲ್ಲಿ ದುಡಿಯುವ ಶಕ್ತಿಯು ಕಡಿಮೆಯಾಗುತ್ತಿದೆ ವಿವಿಧ ಉದ್ಯೋಗಗಳಲ್ಲಿ ತೊಡಗಿರುವವರು ನಿವೃತ್ತಿ ಹೊಂದುತ್ತಾರೆ. ಆದರೆ ಗೃಹೋದ್ಯಗ ಮತ್ತು ಒಕ್ಕಲುತನಗಳಲ್ಲಿ ತೊಡಗಿರುವವರು ತಮ್ಮ ವೃದ್ಯಾಪದಲ್ಲಿಯೂ ದುಡಿಯಬೇಕಾಗುತ್ತಿದೆ. ಈ ಸ್ಥಿತಿಯಲ್ಲಿ ಅವರ ಆದಾಯ ಕಡಿಮೆಯಾಗುತ್ತಿದೆ. ಇಂದಿನ ಭೌತಿಕವಾದದ ವ್ಯಾಪಕ ಪ್ರಭಾವದಲ್ಲಿ "ಹಣವಿಲ್ಲದವನು ಹೆಣಕ್ಕಿಂತ ಕಡೆ" ಯಾಗುವುದರಿಂದ ವೃದ್ದರು ಪ್ರೀತಿ ಗೌರವಗಳಿಂದ ವಂಚಿತರಾಗುತ್ತಾರೆ. ತಮ್ಮ ಯೌವ್ವನ ವಯಸ್ಸಿನ ದುಡಿತದಿಂದ ಬಂದ ಹಣವನ್ನು ಮಕ್ಕಳಿಗೆ ಧಾರೆಎರೆದು ವೃದ್ದರು ಆರ್ಥಿಕವಾಗಿ ದುರ್ಬಲರಾಗುತ್ತಾರೆ. ಅವರು ತಮ್ಮ ನಿತ್ಯದ ಖರ್ಚು ವೆಚ್ಚಗಳಿಗೆ ಕುಟುಂಬದ ಇತರ ಸದಸ್ಯರನ್ನು ಅವಲಂಬಿಸಬೇಕಾಗುತ್ತಿದೆ. ತಮ್ಮ ಖರ್ಚಿಗೆ ಹಣ ದೊರೆಯದಿದ್ದಲ್ಲಿ ಅವರು ಸುಳ್ಳು ಹೇಳುವುದು, ಚಿಕ್ಕ ಪುಟ್ಟ ಕಳ್ಳತನ ಮಾಡುವುದು, ಬಿಕ್ಷೆ ಮಾಡುಬೇಡುವಂತಹ ಕೃತ್ಯಗಳಲ್ಲಿ ತೊಡಗಿರುತ್ತಾರೆ ಕುಟುಂಬಕ್ಕೆ ಹಾಗೂ ಸಮಾಜಕ್ಕೆ ಬೇಡವಾದ ವ್ಯಕ್ತಿಗಳಾಗಿಬಿಡುತ್ತಾರೆ.[1] 'ವೃದ್ದರು ಆಶ್ರಯರಹಿತರಾದರೆ ಬಿಕ್ಷೆಕರಾಗಿರುತ್ತಾರೆ ತಮಗೆ ಕಣ್ಣು ಕಾಣದೆ ಕಿವಿ ಕೇಳದೆ ದೈಹಿಕ ಶಕ್ತಿ ಕುಂದಿದಾಗ ಮಕ್ಕಳೆ

ಮೊದಲಾದ ಕುಟುಂಬದ ಇತರರು ಸೂಕ್ತ ರೀತಿಯಲ್ಲಿ ಹಾರೈಕೆ ಮಾಡದೆ ಹೋದರೆ ಆರ್ಥಿಕವಾಗಿ ತುಂಬ ಹೀನಾಯ ಸ್ಥಿತಿಗೆ ದೂಡಲ್ಪಡುವರು. ಜೀವಿಸುವುದಕ್ಕೆ ಬೇಕಾಗಿರುವ ಅವಶ್ಯ ವಸ್ತುಗಳಾದ ಅನ್ನ, ವಸ್ತ್ರಾ, ವಸತಿಗಳಿಗಾಗಿಯೇ ಪರದಾಡುವವರ ಜೀವನ ದುಸ್ತರವಾಗಿ ನರಕಯಾತನೆ ಅನುಭವಿಸುವರು. ಸಜೀವ ಶವಗಳಂತಿದ್ದು ಸಾವನ್ನೇ ಎದುರು ನೋಡುತ್ತ ದಿನಗಳನ್ನು ನೂಕುತ್ತ ಕಾಲ ಕಳೆಯುವರು. ಒಂದು ದೃಷ್ಟಿಯಲ್ಲಿ ಅವರಿಗಾಗಿ ಏರ್ಪಟ್ಟು ಮಾಡುವ ವಿಶೇಷ ಆರ್ಥಿಕ ಸೌಲಭ್ಯಗಳು ಸರಕಾರಕ್ಕೆ ಹೊರೆಯಾಗಿ ಆರ್ಥಿಕ ತೊಂದರೆ ತಲೆದೂರಬಹುದು.[2] ಆರ್ಥಿಕ ಸ್ಥಿತಿಗತಿಗಳಿಗೆ ತಲೆದೂರಿದಂತಹ ಕಾರಣಗಳು.

### ವಯೋವೃದ್ದರ ಆರ್ಥಿಕತೆಗೆ ಕಾಡುವ ಕೆಲವೊಂದು ಸಮಸ್ಯೆ

1) ಯಾವುದೇ ಆದಾಯ ನೀಡುವಂತಹ ಉದ್ಯೋಗ ವಿಲ್ಲದಿರುವುದು.
2) ಆಸ್ತಿ ಒಡೆತನ ಇಲ್ಲದಿರುವುದು.
3) ಖರ್ಚು ವೆಚ್ಚಗಳಿಗಾಗಿ ಕುಟುಂಬದ ಇತರೇ ಸದಸ್ಯರ ಮೇಲೆ ಅವಲಂಬನೆ.
4) ಕುಟುಂಬದ ಹೊಣೆಗಾರಿಕೆಯಿಂದ ಮುಕ್ತಿ.
5) ದೈಹಿಕ ಸಾಮರ್ಥ್ಯ ಕುಗ್ಗುವಿಕೆ.

### 1) ಯಾವುದೇ ಆದಾಯ ನೀಡುವಂತಹ ಉದ್ಯೋಗ ವಿಲ್ಲದಿರುವುದು.

ವೃದ್ಧ್ಯಾಪದಲ್ಲಿ ವೃದ್ದರು ದುಡಿಯುವುದಕ್ಕೆ ಮತ್ತು ಸಂಪಾದನೆ ಮಾಡುವುದಕ್ಕೆ ಅಸಮರ್ಥರಾಗಿರುತ್ತಾರೆ. ದುಡಿದು ಸಂಪಾದನೆ ಮಾಡಿ ಬರುವಂತಹ ಆದಾಯದಲ್ಲಿ ಮಕ್ಕಳ ಭವಿಷ್ಯದ ಮತ್ತು ಅದರ ಏಳಿಗೆಗಾಗಿ ಖಚುಮಾಡಿ ಬಿಡುತ್ತಾರೆ ಆದರೆ ವೃದ್ಧ್ಯಾಪದಲ್ಲಿ ಯಾವುದೇ ಆದಯ ತರುವಂತಹ ಉದ್ಯೋಗವಿಲ್ಲದ ಕುಟುಂಬದ ಇತರೇ ಸದಸ್ಯರುಗಳನ್ನೇ ಅವಲಂಬಿಸಿರಬೇಕಗುವುದು. ಮಕ್ಕಳು ಇವರ ಖರ್ಚುವೆಚ್ಚಗಳಿಗೆ ಕಡಿವಾಣ ಹಾಕಿ ಇವರಿಗೆ ಯಾವುದೇ ಆರ್ಥಿಕ ಭದ್ರತೆಯನ್ನು ಒದಗಿಸುವುದಿಲ್ಲ. ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಾಗಿ ಕೃಷಿಯನ್ನು ಅವಲಂಬಿಸಿರುವ ಕುಟುಂಬಗಳೇ ಹೆಚ್ಚಾಗಿರುವುದರಿಂದ ಕೇವಲ ಕೃಷಿಯಿಂದ

ಬಂದಂತಹ ಆದಾಯದಲ್ಲಿಯೇ ಜೀವನ ಸಾಗಿಸುವುದು ಸಹಜವಾಗಿದೆ. ಇಂತಹ ಕುಟುಂಬದಲ್ಲಿ ವೃದ್ದರಿಗೆ ಯಾವುದೇ ಉದ್ಯೋಗವಿಲ್ಲದೆ ಮನೆಗಳಲ್ಲಿಯೇ ಕುಳಿತು ಕಾಲಹರಣ ಮಾಡಬೇಕಾಗಿರುತ್ತಿದೆ. ಇಂತಹ ವೃದ್ದರಿಗಾಗಿ ಗೃಹಗಳಲ್ಲಿ ಸುಮ್ಮನೆ ಕಾಲಹರಣ ಮಾಡದೆ ಸ್ವಂತ ತಮ್ಮ ಖರ್ಚುಗಳಿಗಾಗಿ ಮತ್ತು ತಮ್ಮ ವೈಯಕ್ತಿಕ ಚಟಗಳಿಗಾಗಿ ಅವರವರ ಶಕ್ತಿಯ ಸಾಮರ್ಥ್ಯಕ್ಕನುಗುಣವಾಗಿ ಮನೆಗಳಲ್ಲಿ ಕೆಲವೊಂದು ಸಣ್ಣ ಪುಟ್ಟ ಉದ್ಯೋಗಗಳನ್ನು ಕಲ್ಪಿಸಿ ಕೊಡಬೇಕಾಗುವುದು. ಕೆಲವೊಂದು ಸ್ವ ಉದ್ಯೋಗಗಳಾದ ಗುಡಿ ಕೈಗಾರಿಕೆ, ನೇಯುವುದು, ಕುಂಬಾರಿಕೆ, ಕಮ್ಮಾರಿಕೆ ಮುಂತಾದವುಗಳನ್ನು ಉತ್ತೇಜಿಸಿ ವೃದ್ದರಿಗಾಗಿ ಈ ಉದ್ಯೋಗಗಳನ್ನು ಮೀಸಲಿಡುವುದರಿಂದ ವೃದ್ದರು ತಮ್ಮ ವೃದ್ಧ್ಯಾಪದಲ್ಲಿ ಸ್ವಾಲಂಬಿ ಜೀವನ ನಡೆಸುವದಕ್ಕೆ ಸಹಕಾರಿಯಾಗಿವೆ ಮತ್ತು ಪರಾವಲಂಬಿಗಳು ಎನ್ನುವ ಭಾವನೆ ಮರೆಮಾಡುವಂತೆ ಮಾಡುತ್ತವೆ.

**2) ಆಸ್ತಿ ಒಡೆತನ ಇಲ್ಲದಿರುವುದು.**

ಭಾರತೀಯ ಸಂಪ್ರಾದಾಯ ಕುಟುಂಬಗಳಲ್ಲಿ ಆಸ್ತಿಯು ಒಂದು ಪ್ರಮುಖವಾದದು ಪುರಾತನ ಕಾಲದಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಾಗಿರುವುದರಿಂದ ಆಕುಟುಂಬದ ಸಂಪೂರ್ಣ ಆಸ್ತಿಯು ಕುಟುಂಬ ಮುಖ್ಯಸ್ಥನ ಹಸರಿನಲ್ಲಿ ಇರುತಿತ್ತು. ಕುಟುಂಬದ ಯಜಮಾನನೇ ಸರ್ವಾಧಿಕಾರಿಯಾಗಿರುತ್ತಿದ್ದ ಕುಟುಂಬದ ಇತರರೆ ಸದಸ್ಯರು ಯಜಮಾನ ಹೇಳಿದಂತೆ ಕೇಳುವುದು. ಮತ್ತು ಅವನು ನೀಡಿದ ಮಾರ್ಗದರ್ಶದಂತೆ ನಡೆಯುವುದು ಒಂದು ರೂಢಿ ಸಂಪ್ರಾದಾಯವಾಗಿತ್ತು. ಇಂದಿನ ಆಧುನೀಕರಣ, ಕೈಗಾರಿಕೆ ಕಾರ?ಣದಿಂದಾಗಿ ಕುಟುಂಬ ವಿಭಕ್ತ ಕುಟುಂಬಗಳಿಗಾಗಿ ಮಾರ್ಪಟ್ಟು ಯಜಮಾನ ಅಸ್ಥಿತ್ವದಲ್ಲಿದ್ದ ಸಂಪೂರ್ಣ ಅಧಿಕಾರ ಮತ್ತು ಸಮಸ್ತ ಆಸ್ತಿಯನ್ನು ಒಡೆದು ತಮ್ಮಗೆ ಬೇಕಾದ ಪಾಲನ್ನು ತೆಗೆದುಕೊಂಡು ತಮ್ಮ ಹೆಂಡತಿ ಮಕ್ಕಲೊಂದಿಗೆ ಬೇರೆ ಸಂಸಾರ ನಡೆಸುವುದು.ಒಂದು ಪರಿಪಾಠವಾಗಿದೆ ಇದರಿಂದ ವೃದ್ದರು ವೃದ್ಯಾಪದಲ್ಲಿ ಯಾವುದೇ ಒಂದು ಆಸ್ತಿಯ ಒಡೆತನ ಹೊಂದಿರಲಾರದೆ ಸಮಾಜದಲ್ಲಿ ಆರ್ಥಿಕವಾಗಿ ದುರ್ಬಲರಾಗಿರುತ್ತಾರೆ ಆಸ್ತಿಯು ವೃದ್ದರಿಗೆ ಕುಟುಂಬದಲ್ಲಿ ಅನುಭವಿಸಕಾಗಲಾರದ ವಒಂದು ವಸ್ತುವಾಗಿದೆ ವೃದ್ದರು ಆರ್ಥಿಕ ಸ್ಥಿತಿಗತಿಗಳಿಗರ ಆಸ್ತಿಯು ಒಂದು ಮಿಂಚಿನಂತೆ ಕಂಡು ಬರುತ್ತದೆ.

**3) ಖರ್ಚು ವೆಚ್ಚಗಳಿಗಾಗಿ ಕುಟುಂಬದ ಇತರೇ ಸದಸ್ಯರ ಮೇಲೆ ಅವಲಂಬನೆ.**

ವೃದ್ಧರ ಆರ್ಥಿಕತೆ ಸ್ಥಿತಿಗತಿಗಳಲ್ಲಿ ಅನೇಕ ಬದಲಾವಣೆ ತರುವಂತಹದುದ್ದರಲ್ಲೇ ಈ ಖರ್ಚು ವೆಚ್ಚಗಳಿಗಾಗಿ ಕುಟುಂಬದ ಇತರೆ ಸದಸ್ಯರ ಮೇಲೆ ಒಂದಾಗಿದೆ ಅವಿಭಕ್ತ ಕುಟುಂಬಗಳು ಶಿಥಿಲತೆಯಿಂದ ವೃದ್ಧರು ದುಡಿಯುವುದಕ್ಕೆ ಉದ್ಯೋಗವಿಲ್ಲದೆ, ತಮ್ಮ ದಿನನಿತ್ಯ ಖರ್ಚುವೆಚ್ಚಗಳಿಗಾಗಿ ಮಕ್ಕಳನ್ನು ಅವಲಂಬಿಸಿರುತ್ತಾರೆ ಯವುದೆ ಬೇಕು ಬೇಡಿಕೆಯನ್ನು ಈಡೇರಿಸಿಕೊಳ್ಳಬೇಕಾದರೆ ಮಕ್ಕಳ ಮುಂದಿಯೇ ಕೈಚಾಚಿ ನಿಲ್ಲಬೇಕಾಗುವುದೇ ತಮ್ಮಲ್ಲಿರುವುದನ್ನು ಕಳೆದುಕೊಂಡು ಅಥವಾ ಮಕ್ಕಳಿಗಾಗಿ ಖರ್ಚುಮಾಡಿ ತಮಗೆ ಬೇಕಾದುದನ್ನು ಪಡೆಯುವುದಕ್ಕೆ ಅದೇ ಮಕ್ಕಳಲ್ಲಿ ಬೇಡುವುದು ಒಂದು ಪ್ರಸಂಗ. ಇಂದು ಆಧುನಿಕ ಸಮಾಜದಲ್ಲಿ ನಿರ್ಮಾಣವಾಗಿದೆ ತಮ್ಮ ಬೇಕು ಬೇಡಿಕಡಗಳನ್ನು ಈಡೇರಿಸಿಕೊಳ್ಳಲು ಸ್ವಾತಂತ್ರ್ಯವಿಲ್ಲದಷ್ಟು ಕೀಳುಮಟ್ಟದ ಜೀವನ ನಡೆಯುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಕೆಲವೊಂದು ಕುಟುಂಬಗಳಲ್ಲಿ ವೃದ್ಧರ ಸಣ್ಣ ಪುಟ್ಟ ಬೇಡಿಕೆಯನ್ನು ಈಡೇರಿಸುವ ಕುಟುಂಬಗಳು ಇದ್ದರು ಕೆಲವೊಂದು ಕುಟುಂಬಗಳು ವೃದ್ಧರ ಖರ್ಚುವೆಚ್ಚಗಳಿಗಾಗಿ ಶಾಶ್ವತ ಕಡಿವಾಣ ಹಾಕಿರುತ್ತಾರೆ. ಕೆಲವೊಂದು ವೃದ್ಧರು ಸ್ವಾವಲಂಬನೆಗಾಗಿ ತಮ್ಮ ದಿನ ನಿತ್ಯದ ಖರ್ಚುಗಳಿಗೆ ತಾವೆ ಕಡಿವಾಣ ಹಾಕಿ ಕೊಂಡಿರುತ್ತಾರೆ. ಇಂತಹ ವೃದ್ಧರು ಸಮಾಜದಲ್ಲಿ ಯಾವುದೇ ಘನತೆ ಗೌರವದಿಂದ ಬಾಳಲು ಇಚ್ಚಿಸುವುದಿಲ್ಲ ಕೇವಲ ಮನೆಯಲ್ಲಿಯೇಒಂದು ಕೊಠಡಿಯಲ್ಲಿ ಜೀವನ ನಡೆಸುವಂತಹರಾಗಿರುತ್ತಾನೆ.

**4) ಕುಟುಂಬದ ಹೊಣೆಗಾರಿಕೆಯಿಂದ ಮುಕ್ತಿ.**

ಸಮಾಜದಲ್ಲಿ ಪ್ರತಿಯೊಬ್ಬ ಪ್ರಜೆಗೂ ಅಥವಾ ವ್ಯಕ್ತಿಗೂ ಅವನದೆ ಆದ ಕೆಲವೊಂದು ಹೊಣೆಗಾರಿಕೆಯನ್ನು ಹೊಂದಿರುತ್ತಾನೆ. ಸಂಪ್ರದಾಯ ಕುಟುಂಬದಲ್ಲಿ ಕುಟುಂಬದ ಯಜಮಾನನ ಹೊಂಎಗಾರಿಕೆ ಬೇರೆಯಾದರೆ ಅದೆ ಕುಟುಂಬದ ಸ್ತ್ರೀಯರ ಹೊಣೆಗಾರಿಕೆ ಬೇರೆಯಾಗಿರುತ್ತವೆ. ಸಮಾಜದಲ್ಲಿ ಸ್ತ್ರೀ ಪುರಷರ ಹೊಣೆಗಾರಿಕೆ ಒಂದಕ್ಕೊಂದು ವಿಭಿನ್ನ ವಾಗಿರುತ್ತವೆ. ಸ್ತ್ರೀಯು ನಿರ್ವಹಿಸುವ ಪಾತ್ರಗಳು ಬೇರೆಯಾದರೆ ಪುರಷ ಹೊಣೆಗಾರಿಕೆ ಬೇರಯಾಗಿರುತ್ತದೆ. ಕೆಲವೊಂದು ಕುಟುಂಬಗಳು ತಂದೆಯ ಯಜಮಾನಕೆಯಲ್ಲಿ ನಡೆದರೆ ಕೆಲವೊಂದು ಕುಟುಂಬಗಳು ತಾಯಿಯ ಯಜಮಾನಿಕೆಯಲ್ಲಿ ಮುಂದುವರೆದಿರುತ್ತಿದೆ. ಇಂತಹ

ಕುಟುಂಬಗಳಲ್ಲಿ ಸಂಪೂರ್ಣ ಆಸ್ತಿಯು ಬಡತನವನ್ನು ಕುಟುಂಬದ ಯಜಮಾನ/ನಿ ಹೊಂದಿರುತ್ತಾರೆ/ಳೆ ಸಮಾಜ ನಿಂತ ನೀರಲ್ಲ ಬದಲಾವಣೆ ಹೊಂದಿರುತ್ತಿರುವುದು. ಒಂದು ಪ್ರಕ್ರಿಯೆಯಾಗಿದೆ. ಬದಲಾಗುತ್ತಿರುವ ಸಮಾಜದಲ್ಲಿ ಅವರವರ ವಯಸ್ಸು ಅನುಗುಣವಾಗಿ ತಮ್ಮ ತಮ್ಮ ಹೊಣೆಗಾರಿಕೆಯಿಂದ ಸ್ವಯಂ ಪ್ರೇರಿತರಾಗಿ ಮುಕ್ತಿ ಹೊಂದುವವರು ಬಹಳ ಕಡಿಮೆ ಕೇವಲ ಸ್ವಾರ್ಥಕ್ಕಾಗಿ ಅಥವಾ ಪ್ರಚೋದನೆಗೆ ಒಳಗಾಗಿ ಇನ್ನೊಬ್ಬರ ಅಧಿಕಾರ, ಆಸ್ತಿ, ಅಂತಸ್ತುಗಳನ್ನು ಕಸಿದುಕೊಳ್ಳುವ ಜನರೇ ಹೆಚ್ಚಾಗಿದ್ದಾರೆ. ಸಮಾಜದಲ್ಲಿ ವ್ಯಕ್ತಿಯು ಸ್ಥಿತಿವಂತನಾಗಬೇಕಾದರೆ ಮತ್ತು ಆರ್ಥಿಕತೆಯಿಂದ ಪ್ರಬಲನಾಗಬೇಕಾದರೆ ಅವರವರಿಗೆ ಹೊಣೆಗಾರಿಕೆಯು ಪ್ರಮುಖವಾದದು. ಕುಟುಂಬದಲ್ಲಿ ವೃದ್ಧರು ಸಂಪೂರ್ಣವಗಿ ಸಾಯುವತನಕ ನೆಮ್ಮದಿಯಿಂದ ಬದುಕಬೇಕಾದರೆ ಅವರಿಗೆ ವಯಸ್ಸಿಗನುಗುಣವಗಿ ಒಂದಾದರು ಒಂದು ಹೊಣೆಗಾರಿಕೆಯನ್ನು ಹೊಂದಿರಬೇಕಾಗಿರುತ್ತದೆ. ಆದರೆ ಕುಟುಂಬದಲ್ಲಿ ವೃದ್ಧರಿಗೆ ಹೊಣೆಗಾರಿಕೆಯಿಂದ ಮುಕ್ತಿಗೊಳಿಸಲಾಗಿದೆ ಇದರಿಂದ ವಯೋವೃದ್ಧರು ಆರ್ಥಿಕತೆಗೆ ಧಕ್ಕೆ ಬರುವಂತ ವಿಷಯವಾಗಿದೆ.

### 5) ದೈಹಿಕ ಸಾಮರ್ಥ್ಯ ಕುಗ್ಗುವಿಕೆ.

ಮನುಷ್ಯ ಹುಟ್ಟುವಾಗಲೇ ಸಮಸ್ಯೆಗಳನ್ನು ಬೆನ್ನೆಗಂಟ್ಟಿಕೊಂಡೆ ಹುಟ್ಟುತ್ತಾನೆ. ಹುಟ್ಟಿದಾಗಿಂದಲೇ ಪ್ರತಿಯೊಂದು ವಯಸ್ಸಿಗನುಗುಣವಾಗಿ ಸಮಸ್ಯೆಗಳನ್ನು ಎದರಿಸುತ್ತ ಕೆಲವೊಂದು ಸಮಸ್ಯೆಗಳಿಗೆ ಶಾಶ್ವತ ಪರಿಹಾರ ಕಂಡು ಕೊಳ್ಳುತ್ತಾನೆ. ಇನ್ನು ಕೆಲವೊಂದು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿ ಹೊರಬರಲರದೆ ಒದ್ದಾಡುತ್ತಾನೆ ಇಂತಹ ಸಮಸ್ಯೆಗಳಲ್ಲಿ ಅದರಲ್ಲಿಯೂ ವೃದ್ಧಾಪದಲ್ಲಿ ದೈಹಿಕ ಶಕ್ತಿ ಸಾಮರ್ಥ್ಯ ಕುಗ್ಗುವುದು. ಒಂದು ಪ್ರತಿಯೊಬ್ಬ ಜೀವನದಲ್ಲಿ ಬರುವಂತಹ ಪ್ರಕ್ರಿಯೆಯಾಗಿದೆ ವೃದ್ಧರು ಆರ್ಥಿಕ ಬಲಹೀನತೆಗೆ ದೈಹಿಕ ಶಕ್ತಿಯ ಸಾಮರ್ಥ್ಯದ ಒಂದು ಪ್ರಮುಖವಾದದು ವೃದ್ಧರು ಸ್ವಾಲಂಬನೆಯಗಿ ದುಡಿದು ಸ್ವಾತಂತ್ರವಗಿ ಬದುಕಬೇಕು ಎನ್ನುವ ಆಸೆ ಶಕ್ತಿ ಸಾಮರ್ಥ್ಯವು ಹುಸಿ ಮಾಡಿರುತ್ತದೆ. ದೈಹಿಕ ಸಾಮರ್ಥ್ಯ ಕುಗ್ಗುವಿಕೆಯಿಂದ ವೃದ್ಧರು ಪರಾವಲಂಬಿಗಳಾಗಿರುತ್ತಾರೆ. ಮತ್ತು ಕೆಲವೊಂದು

ವಾಸಿಮಾಡಲಾರದಂತಹ ರೋಗಗಳಿಗೆ ತುತ್ತಾಗುತ್ತಾರೆ. ಇದರಿಂದ ಹನ್ನೊಂದು ವರ್ಷ ಬದುಕುವ ವ್ಯಕ್ತಿ ಒಂದೇ ವರ್ಷಕ್ಕೆ ಸಾವಿನ ಮನೆಯ ಬಗಿಲನ್ನು ತಟ್ಟುತ್ತನೆ. ವೃದ್ದರು ನಿರಂತರವಾಗಿ ತಮ್ಮ ಆರ್ಥಿಕತೆಯನ್ನು ಬಲಪಡಿಸಿಕೊಳ್ಳಲು ಒಂದಲ್ಲ ಒಂದು ರೀತಿಯ ಉದ್ಯೋಗದಲ್ಲಿ ತೊಡುಗವದರಿಂದ ಮನಸ್ಸಿಗೆ ನೆಮ್ಮದಿಯಿಂದಿರಲು ಕಾರಣವಾಗುತ್ತದೆ ಆದರೆ ಶಕ್ತಿ ಅದಕ್ಕೆ ತಡೆ ಗೋಡೆಯನ್ನು ನಿರ್ಮಿಸಿ ವೃದ್ದರು ಆರ್ಥಿಕವಾಗಿ ಹಿಂಬೀಳುವಿಕೆಗೆ ಕಾರಣವಾಗುತ್ತದೆ.

### ☆ ಧಾರ್ಮಿಕ ಸ್ಥಿತಿಗತಿಗಳು

ವಯೋವೃದ್ದರಿಗೆ ಕಾಡುವ ಮತ್ತು ಅವರನ್ನು ಏಕಾಂತಿತನವನ್ನು ಹೆಚ್ಚಿಸುವ ಇನ್ನೊಂದು ಸ್ಥಿತಿಗತಿಗಳಲ್ಲಿ ಧಾರ್ಮಿಕ ಸ್ಥಿತಿಗತಿಗಳು ಪ್ರಮುಖವಾದುದು. ಸಮಾಜದಲ್ಲಿ ರೂಢಿ, ಸಂಪ್ರದಾಯ, ಆಚಾರ, ವಿಚಾರಗಳನ್ನು ರೂಢಿಸಿಕೊಂಡು ಬಂದಿರುವ ಒಂದು ಸಮಾಜದ ಪ್ರವೃತ್ತಿಯಾದರೆ ಅದೇ ಸಮಾಜದಲ್ಲಿ ವಯೋವೃದ್ದರಿಗೆ ಧಾರ್ಮಿಕವಾಗಿ ಹಿರಿಯರು ಎನ್ನುವ ಗೌರವವನ್ನು ಕೊಡದೆ ಧಾರ್ಮಿಕವಾಗಿ ದೂರಲ್ಪಟ್ಟಿರುತ್ತಾರೆ, ಯಾವುದೇ ಹಬ್ಬ ಹರಿದಿನಗಳಲ್ಲಿ ಅವರನ್ನು ದೂರ ಇಡುವುದು, ವಯೋವೃದ್ಧರನ್ನು ಮಾತನಾಡಿಸುವಷ್ಟು ಕೆಳಮಟ್ಟದ ಸ್ಥಾನ ಮಾನಗಳನ್ನು ಹಿಂದಿನ ಆಧುನಿಕ ಸಮಾಜದಲ್ಲಿ ಕಂಡುಬರುವ ದೃಶ್ಯವಾಗಿದೆ, ಪುರಾತನ ಕಾಲದಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಾಗಿ ಕಾಣುತ್ತಿದ್ದವು ಈ ಅವಿಭಕ್ತ ಕುಟುಂಬದಲ್ಲಿ ವೃದ್ದರಿಗೆ ಘನತೆ, ಗೌರವ ಸಿಗುತ್ತಿದ್ದವು. ಪಾಲನೆ, ಪೋಷಣೆ, ರಕ್ಷಣೆಯನ್ನು ಒದಗಿಸಲಾಗುತ್ತಿತ್ತು. ವೃದ್ಧರು ನಡೆದುಕೊಂಡು ಬಂದ ದಾರಿಯಲ್ಲಿ ಕುಟುಂಬದ ಇತರೆ ಸದಸ್ಯರು ಪಾಲಿಸುತ್ತಿದ್ದರು. ವೃದ್ಧರು ತೋರಿಸಿದ ದಾರಿಯಲ್ಲಿ ನಡೆಯುತ್ತಿದ್ದರು. ವೃದ್ಧರು ಆದರ್ಶಗಳನ್ನು ತತ್ವಗಳನ್ನು ಪಾಲಿಸಿತ್ತಿದ್ದರು ಹಿರಿಯರು ಹೇಳಿದ ಪ್ರತಿಯೊಂದು ಮಾತುಗಳನ್ನು ಕೇಳುವುದು ಮಾರ್ಗದರ್ಶನದಂತೆ ನಡೆಯುವುದು ಹೇಳಿದ ಕೆಲಸವನ್ನು ತಪ್ಪದೆ ಮಾಡುವುದು ಒಂದು ಪದ್ಧತಿಯಾಗಿತ್ತು. ಹಿರಿಯರು ಹೇಳಿದ ನ್ಯಾಯಬದ್ಧವಾದ ತೀರ್ಪುಗಳನ್ನು ಒಪ್ಪಿಕೊಳ್ಳುತ್ತಿದ್ದರು. ಧಾರ್ಮಿಕ ಆಚರಣೆಯಲ್ಲಿ ಅವರಿಗೆ ಪ್ರತಿಯೊಬ್ಬರು ಗೌರವ ಕೊಡುತ್ತಿದ್ದರು. ಆದರೆ ಕೈಗಾರೀಕರಣ, ನಗರೀಕರಣದಿಂದಾಗಿ ಅವಿಭಕ್ತ ಕುಟುಂಬಗಳು ಶಿಥಿಲಗೊಂಡು ವ್ಯಕ್ತಿಗಳು ಸ್ವಾರ್ಥಮನೋಭಾವನೆಗಳಿಗೆ ಒಳಗಾಗಿ

ಗ್ರಾಮಂತರದಿಂದ ನಗರ ಪ್ರದೇಶಕ್ಕೆ ವಲಸೆ ಬಂದು ಜನ್ಮ ನೀಡಿದ ತಂದೆ ತಾಯಿಗಳನ್ನು ಕಡೆಗಣಿಸುವ ಒಂದು ಪರಿಪಾಠವಾಗಿದೆ. ಇದರಿಂದ ವಯೋವೃದ್ಧರು ಧಾರ್ಮಿಕವಾಗಿ ಯಾವುದೇ ಹಬ್ಬ ಹರಿದಿನಗಳನ್ನು ಕಾಣದೆ ಯಾವುದೆ ರೀತಿಯ ಸಿಹಿ ಊಟವನ್ನು ಮಾಡದೆ ಮಾನಸಿಕವಾಗಿ ನೊಂದು ಬೆಂದು ಜೀವನವನ್ನು ನೋವಿನಲ್ಲಿ ಕಾಲವನ್ನು ಕಳೆಯುವ ಒಂದು ಪ್ರವೃತ್ತಿಯಾಗಿದೆ. ವಯೋವೃದ್ಧರಿಗೆ ಧಾರ್ಮಿಕವಾಗಿ ಸಿಗಬೇಕಾದ ಸ್ಥಾನ ಮಾನ ಗೌರವ ಹಿಂದಿನ ಆಧುನಿಕ ಸಮಾಜದಲ್ಲಿ ಸಿಗುತ್ತಿಲ್ಲ ಮತ್ತು ಗೌರವ ಕೊಡುವುವರಿಲ್ಲ. ಅನೇಕ ವೃದ್ಧರು ಭಿಕ್ಷೆ ಬೇಡುವುದುರ ಮೂಲಕ ತಮ್ಮ ಜೀವನವನ್ನು ಅತಂತ್ರ ಸ್ಥಿತಿಗೆ ತಂದು ಕೊಂಡರಿತ್ತಾರೆ. ಹಬ್ಬಗಳನ್ನು ಆಚಾರಿಸಲು ಪದ್ಧತಿಗಳನ್ನು ರೂಪಸಿಕೊಟ್ಟಾಂತಹ ವೃದ್ಧರು ಜೀವನದಲ್ಲಿ ಘನತೆ ಗೌರವಗಳೊಂದಿಗೆ ಬಾಳಿದ ವ್ಯಕ್ತಿ ತನ್ನ ಕುಟುಂಬದ ಎಲ್ಲಾ ಜವಾಭ್ದಾರಿಗಳನ್ನು ಯಶಸ್ವಿಯಾಗಿ ನಡೆಸಿ ಸಂಸಾರಕ್ಕಾಗಿ ತನ್ನ ಜೀವನವನ್ನೆ ಮುಡುಪಾಗಿಸಿಟ್ಟಿದ್ದ ವ್ಯಕ್ತಿ ಪ್ರತಿಯೊಂದು ಕ್ಷೇತ್ರದಲ್ಲಿ ತನ್ನ ಜೀವನವನ್ನು ಸಾಗಿಸುವುದಕ್ಕೆ ನೊಂದು ಬೆಂದು ಬಾಳ ಬೇಕಾದ ಒಂದು ಪ್ರಸಂಗ ಆಧುನಿಕ ಸಮಾಜದಲ್ಲಿ ಕಂಡುಬರುವ ದೃಶ್ಯವಾಗಿದೆ. ಸಮಾಜದಲ್ಲಿ ವಯೋವೃದ್ಧರು ಧಾರ್ಮಿಕ ಸ್ಥಿತಿಗತಿಗಳು ಸಹ ಒಂದು ಶಾಪವಾಗಿ ಕಾಡ ತೊಡಗಿದೆ. ಧರ್ಮದಲ್ಲಿ ರೂಢಿ ಸಂಪ್ರದಾಯಗಳನ್ನು ರಚಿಸಿದ ವ್ಯಕ್ತಿಗಳಿಗೆ ಅದೇ ಧರ್ಮದಲ್ಲಿ ಅಗೌರವ ಕೀಳು ಹಿರಿಮೆಯನ್ನು ತಂದು ಕೊಡುವಂತಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಸಮಾಜದಲ್ಲಿರುವ ಪ್ರತಿಯೊಬ್ಬ ಪ್ರಜೆಯು ಧಾರ್ಮಿಕವಾಗಿ ವಯೋವೃದ್ಧರನ್ನು ಗೌರವ ಮನೋಭಾವನೆಯಿಂದ ಕಾಣುವ ಒಂದು ಪ್ರವೃತ್ತಿಯನ್ನು ಮಾಡಿಕೊಂಡಿರಬೇಕಾಗಿರುತ್ತದೆ. ವೃದ್ಧಾಪ್ಯದಲ್ಲಿ ಧಾರ್ಮಿಕ ಸ್ಥಿತಿಗತಿಗಳು ಒಂದು ಶಾಪದಂತೆ ಕಾಣುತ್ತವೆ. ಇದರಿಂದ ವೃದ್ಧಾಪ್ಯವು ಒಂದು ವರವು ಹೌದು ಶಾಪವು ಹೌದು.

**ಪ್ರಸ್ತುತ ಸಮಾಜದಲ್ಲಿ ಧಾರ್ಮಿಕ ಸ್ಥಿತಿಗತಿಗಳಿಗೆ ಪೂರಕವಾದ ಅಂಶಗಳು.**

**1. ತಿರಸ್ಕಾರ ಮನೋಭಾವನೆ**

ಪ್ರಾಚೀನ ಕಟುಂಬ ವ್ಯವಸ್ಥೆಯಲ್ಲಿ ವೃದ್ದರಿಗೆ ಗೌರವವನ್ನು ಕೊಡುವ ಒಂದು ಪರಿಪಾಠವಾಗಿ ಕಾಲಾನುಕ್ರಮದಲ್ಲಿ ಬದಲಾವಣೆಯಿಂದ ಕುಟುಂಬದಲ್ಲಿ, ಸಮಾಜದಲ್ಲಿ ಇತ್ತೀಚಿನ ಕಾಲದಲ್ಲಿ ವೃದ್ದರಿಗೆ ಯಾರೊಬ್ಬ ವ್ಯಕ್ತಿಯು ಗೌರವ ನೀಡದಿರುವುದು ಕಂಡು

ಬರುತ್ತದೆ. ಭಾರತೀಯ ಸಂಪ್ರದಾಯದಲ್ಲಿ ಹಿರಿಯರು, ಎನ್ನುವ ಭಾವನೆಯು ಪ್ರತಿಯೊಬ್ಬರ ಅಥವಾ ಕಿರಿಯರಿಂದ ಹಿಡಿದು ಹಿರಿಯವರೆಗೆ ಕಾಣುತ್ತಿತ್ತು.ಹಿರಿಯರು ಮಾರ್ಗದರ್ಶನ ಕೆಲವೊಂದು ಹಬ್ಬ ಹರಿದಿನಗಳಲ್ಲಿ ಹಿರಿಯರಿಗೆ ಒದುಗುತ್ತಿದ್ದವು. ವೃದ್ದರ ಮಾತಿಗೆ ಯಾರೊಬ್ಬರು ಎದುರು ವಾದಿಸದೆ ಅವರು ಹೇಳಿದಂತೆ ನಡೆದುಕೊಳ್ಳತ್ತಿದ್ದರು. ಇದರಿಂದ ಹಬ್ಬ ಹರಿದಿನಗಳಲ್ಲಿ ಧಾರ್ಮಿಕ ಕ್ಷೇತ್ರದಲ್ಲಿ ಎಲ್ಲಾ ಕಾರ್ಯಗಳು ಸುವ್ಯವಸ್ಥೆಯಿಂದ ನಡೆಯುತ್ತಿದ್ದವು. ಯಾವುದೇ ಘಟನೆಗೆ ಸಂಬಂದಿಸಿದಂತೆ ವೃದ್ದರೇ ನ್ಯಾಯವನ್ನೂ ಮಾಡಿ ತೀರ್ಪನ್ನು ಕೊಡುತ್ತಿದ್ದರು. ಅವರು (ಪಂಚರು) ಇವರು ಅನುಭವಸ್ತರು, ವಿಚಾರವಾದಿಗಳು ಹಾಗು ತಮ್ಮ-ತಮ್ಮ ಊರಿನ ಏಳಿಗೆಗೆ ದುಡಿದವರಾಗಿರುತ್ತಿದ್ದರು. ಒಂದು ಪದ್ದತಿಯಂತೆ ರೂಡಿ ಸಂಪ್ರದಾಯದಂತೆ ಜೀವನ ಸಾಗಿಸುವುದಕ್ಕೆ ಮಾರ್ಗದರ್ಶಿಗಳಾಗಿ ದುಡಿದವರಾಗಿರುತ್ತಿದ್ದರು. ಪ್ರಸ್ತುತ ಸಮಾಜ ಬದಲಾವಣೆಯಿಂದ ವೃದ್ಧರನ್ನು ಧಾರ್ಮಿಕವಾಗಿ ತಿರಸ್ಕಾರಕ್ಕೆ ಒಳಗಾಗಿದ್ದಾರೆ. ಯಾವುದೇ ಹಬ್ಬ ಹರಿದಿನಗಳನ್ನು ಕಾಣದವರಾಗಿದ್ದಾರೆ. ಇವರು ರೂಡಿಸಿದಂತಹ ರೂಡಿ ಸಂಪ್ರಾದಾಯಗಳು ಮಾಯವಾಗಿ, ವಿಚಿತ್ರ ರೂಢಿ ಸಂಪ್ರದಾಯಗಳು ಮತ್ತು ಆಧುನಿಕ ರೂಢಿ ಸಂಪ್ರದಾಯಗಳು ರಚಿತವಾಗತೊಡಗಿದ್ದು, ವೃದ್ದರ ಮಾರ್ಗದರ್ಶನ ಇಂದು ಯಾರು ಕೇಳುವವರು ಕಾಣಿಸುತ್ತಿಲ್ಲ. ತಮಗೆ ಇಷ್ಟಬಂದಹಾಗೆಯೇ ತಮ್ಮ ಜೀವನದ ಶೈಲಿಯನ್ನು ಬದಲಾಯಿಸಿಕೊಂಡಿದ್ದಾರೆ. ಇದರಿಂದ ವೃದ್ದರು ಹೆಚ್ಚು ಹೆಚ್ಚು ತಿರಸ್ಕಾರ ಭಾವನೆಗೆ ಒಳಗಾಗಿರುತ್ತಾರೆ. ಆದರೆ ಪ್ರಸ್ತುತ ಸಮಜಕ್ಕೆ ವೃದ್ದರು ಮತ್ತು ಅವರ ಮಾರ್ಗದರ್ಶನವು ಪ್ರತಿಯೊಂದು ಕುಟುಂಬಕ್ಕೆ ಅವಶ್ಯಕವಾಗಿರುತ್ತದೆ.

### 2. ಪ್ರತ್ಯೇಕವಾದ ವಾಸ (ದೂರವಿಡುವುದು)

ಹಿಂದಿನ ಯಾವುದೇ ಸಭೆ ಸಮಾರಂಭಗಳಿಗೆ ಮತ್ತು ವಿವಾಹ ಸಂಬಂಧಗಳಿಗೆ ವೃದ್ದರನ್ನು ಕರೆದುಕೊಂಡು ಹೋಗುವುದು ಪರಿಪಾಠವಾಗಿತ್ತು. ಹಿರಿಯರು ಮಾಡಿದ ಆರ್ಶಿವಾದಗಳಿಂದ ಜೀವನದಲ್ಲಿ ಎಲ್ಲಾ ಒಳ್ಳೆಯದಾಗುತ್ತಿರುತ್ತದೆ. ಎನ್ನುವ ಒಂದು ಬಲವಾದ ನಂಬಿಕೆಯುಳ್ಳಕಾಲ ಮನೆಯಲ್ಲಿ ಅಥವಾ ಕುಟುಂಬದಲ್ಲಿ ಮೊದಲು ವೃದ್ದರಿಗೆ ಊಟ ಬಡಿಸುವುದು ಓಂದು ಸಂಪ್ರದಾಯದ ಕಾಲ. ಎಲ್ಲಾ ಕುಟುಂಬದ ಸದಸ್ಯರಲ್ಲಿ ಅನೂನ್ಯ

ಮತ್ತು ಐಕ್ಯತೆ ಮನೋಭಾವನೆಯುಳೊಂದು ಯುಗ ಈ ಎಲ್ಲಾ ನಂಬಿಕೆಗಳು ಸುಳ್ಳು ಎಂದು ಸಾಬೀತು ಮಡಿರುವುದು ಪ್ರಸ್ತುತ ಸಮಾಜ. ಈ ಪ್ರಸ್ತುತ ಸಮಾಜದಲ್ಲಿ ವೃದ್ದರನ್ನು ಗೌರವದಿಂದ ಕಾಣದಿರುವುದು ದೂರದ ಮಾತು. ಕುಟುಂಬದ ಸದಸ್ಯರಲ್ಲಿ ಕುಟುಂಬದಲ್ಲಿ ಪ್ರತ್ಯಕವಾಗಿ ದೂರವಿಡುವ ಒಂದು ಅನೈತಿಕ ವ್ಯವಸ್ಥೆ ಬಂದಿರುವುದು ಮತ್ತು ವೃದ್ದರೊಂದಿಗೆ ಅನಾಗರೀಕತೆಯಿಂದ ನಡೆದುಕೊಳ್ಳುವುದು ಒಂದು ವ್ಯವಸ್ಥೆ ನಿರ್ಮಾಣವಾಗಿದೆ. ಪ್ರಾಚೀನ ಕಾಲದ ಕುಟುಂಬದಲ್ಲಿನ ವೃದ್ದರ ಆರೈಕೆಗೆ ಮತ್ತು ಆಧುನಿಕ ಸಮಾಜದ ಕುಟುಂಬದಲ್ಲಿನ ವೃದ್ದರ ಆರೈಕೆಗೂ ಅಜಗಜಾರಿತರದ ವ್ಯತ್ಯಾಸವನ್ನು ಕಾಣಬಹುದಾಗಿದೆ. ಆಧುನಿಕ ಸಮಾಜದಲ್ಲಿ ಕುಟುಂಬದ ಸದಸ್ಯರ ಆಹಾರ ಬೋಜನೆಯನಂತರವೇ ವೃದ್ದರು ಊಟ ಮಡಬೇಕು ಅದು ಇದ್ದರೆ ಮಾತ್ರ ಇಲ್ಲದಿದ್ದರೆ ಅವತ್ತಿನ ಊಟ ನೀರೆಗತಿಯಾಗಿರುತ್ತದೆ. ಊಟ ನೀಡಿದರೂ ಅರೆಬರೆಹೊಟ್ಟೆ ಇಂತಹ ಒಂದು ವ್ಯೆವಸ್ಥೆ ಬಂದಿರುತ್ತದೆ. ಕುಟುಂಬದ ಸದಸ್ಯರು ವೃದ್ಧ ತಂದೆ–ತಾಯಿಗಳನ್ನು ಒಂದು ಪ್ರತ್ಯೇಕ ಕೋಣೆಯಲ್ಲಿಡುವುದು ಮತ್ತು ಅವರಿರುವ ಕೋಣೆಗೆ ಊಟವನ್ನು ಕಳುಹಿಸಿಕೊಡುವ ಮಕ್ಕಳನ್ನು ಇಂದಿನ ಸಮಾಜದಲ್ಲಿ ಕಾಣುತ್ತೇವೆ.

### ☆ ದೈಹಿಕ ಅಥವ ಶಾರೀರಿಕ ಸ್ಥಿತಿಗತಿಗಳು

ವಯೋವೃದ್ಧರ ಸ್ಥಿತಿಗತಿಗಳಲ್ಲಿ ಶಾರೀರಿಕ ಸ್ಥಿತಗತಿಗಳು ಇವರನ್ನು ಕಾಡುವ ಮತ್ತೊಂದು ಪ್ರಭಲವಾದ ಸಮಸ್ಯೆಯಾಗಿದೆ. ಮಾನಸಿಕವಾಗಿ ಬೆಂದು ನೊಂದು ಇವರ ದೇಹದಲ್ಲಿ ಮತ್ತು ಆರೋಗ್ಯದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಏರು ಪೇರು ಆಗುತ್ತಿರುವುದು ಸರ್ವೇಸಾಮಾನ್ಯದ ಪ್ರಸಂಗವಾಗಿದೆ. ವ್ಯಕ್ತಿಗಳು ಬಾಲ್ಯ, ಯೌವ್ವನಾವ್ಯವಸ್ಥೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಆರೋಗ್ಯವಂತರಾಗಿರುತ್ತಾರೆ, ಬಲಿಷ್ಟರಾಗಿರುತ್ತಾರೆ ಯಾವುದೇ ಕಷ್ಟಕರ ಕೆಲಸವನ್ನು ಸರಳವಾಗಿ ಮಾಡಿ ಮುಗಿಸುವಂತವರಾಗಿರುತ್ತಾರೆ. ಆದರೆ ಮುಪ್ಪಿನ ವಯಸ್ಸಿನಲ್ಲಿ

ಶಕ್ತಿಯ ಸಾಮಾರ್ಥ್ಯವನ್ನು ಕಳೆದುಕೊಂಡು ಕೆಲಸಕ್ಕೆ ಬಾರದಂತಹ ವ್ಯಕ್ತಿಗಳಾಗಿ ಅಪ್ರಯೋಜಕರಾಗಿರುತ್ತಾರೆ ಮತ್ತು ಪರಾವಲಂಭಿಗಳಾಗಿ ಬದುಕಬೇಕಾಗುತ್ತದೆ. ವೃದ್ಧರು ಕುಟುಂಬದಲ್ಲಿ ಮಕ್ಕಳು, ಮೊಮ್ಮಕ್ಕಳು ಮತ್ತು ಕುಟುಂಬದ ಇತರ ಸದಸ್ಯರು ವೃದ್ಧರನ್ನು ಕಡೆಗಣಿಸುವುದರಿಂದ ಇವರು ಮನೆತೊರೆಯುವುದು, ಭಿಕ್ಷೆ ಬೇಡುವುದು ಸುವ್ಯವಸ್ಥೆ ಇರಲಾರದಂತಹ ಸ್ಥಳಗಳಲ್ಲಿ ವಾಸ ಮಾಡುವುದು ಮತ್ತು ಗುಣಮಟ್ಟದ ಆಹಾರ ಸೇವನೆ ಮಾಡಲಾರದಂತಹ ಅನೇಕ ರೋಗ ರುಜಿಗಳಿಗೆ ಮಾರಕವಾದಂತಹ ಕಾಯಿಲೆಗೆ ತುತ್ತಾಗಿ ಪ್ರಾಣವನ್ನು ಬಿಡುವ ಘಟನೆಗಳು ಜರುಗುತ್ತಲೆ ಇವೆ. ಪರಾತನ ಕಾಲದಲ್ಲಿ ಆಹಾರ ಸೇವನೆಯಲ್ಲಿ ಪೌಷ್ಟಿಕತೆ ಇರುವುದರಿಂದ ಕಷ್ಟಕರ ಕೆಲಸವನ್ನು ಮಾಡುವುದರಿಂದ ವ್ಯಕ್ತಿಗಳು ಸಾಕಷ್ಟು ಪ್ರಮಾಣದಲ್ಲಿ ಬಲಿಷ್ಠರಾಗಿರುತ್ತಿದ್ದರು. ಅವರು ಅರವತ್ತು ವಯಸ್ಸಾದರು ಇನ್ನು ಯೌವ್ವನಾವಸ್ಥೆಯಲ್ಲಿ ಇರುವಂತೆ ಕಾಣುತ್ತಿದ್ದರು. ಅತೀ ಹೆಚ್ಚು ಸಂತಾನ ಪಡೆಯುವ ಸಾಮರ್ಥ್ಯವಂತವರಾಗಿರುತ್ತಿದ್ದರು. ಆದರೆ ಆಧುನೀಕರಣದಿಂದ, ನಗರೀಕರಣದಿಂದ ಇಂದು ವ್ಯಕ್ತಿಗಳು ನಲವತ್ತನೇ ವಯಸ್ಸಿಗೆ ಮುಪ್ಪಾದ ಹಾಗೆ ಕಂಡು ಬರುತ್ತಿದ್ದು ಇವರು ಯಾವುದೇ ಬಾರವಾದ ಕೆಲಸವನ್ನು ನಿರ್ವಹಿಸಲು ಅಶಕ್ತರಾಗಿರುತ್ತಾರೆ. ಅರವತ್ತಕ್ಕೆ ಅರಳು ಮರಳು ಎಂಬ ಗಾದೆಯನ್ನು ಸುಳ್ಳುಮಾಡಿ ತೋರಿಸುತ್ತಾರೆ. ಆಧುನಿಕ ಸಮಾಜದಲ್ಲಿ ನಲವತ್ತನೇ ವಯಸ್ಸಿಗೆ ಅಂಧತ್ವ ಕಳೆದುಕೊಳ್ಳುವುದು, ಅಂಗವಿಕಲತೆ ಮಾಡಿಕೊಳ್ಳುವುದು, ಕಿವುಡುತನ, ಮಾರಕ ರೋಗಗಳಿಗೆ ತುತ್ತಾಗುವುದು, ಇಂತಹುಗಳಿಂದ ವ್ಯಕ್ತಿಯ ಶಾರೀರಿಕ ಸ್ಥಿತಿಗತಿಯಲ್ಲಿ ಸಾಕಷ್ಟ ಪ್ರಮಾಣದಲ್ಲಿ ಬದಲಾವಣೆ ಹೊಂದುತ್ತಿರುವುದು ಸಾಮನ್ಯ ವಿಷಯ. ವ್ಯಕ್ತಿಗಳಲ್ಲಿ ಬಹುಬೇಗನೆ ವಯಸ್ಸಾಗುವುಕೆಯನ್ನು ಗುರುತಿಸುವಲ್ಲಿ ಪೌಷ್ಟಿಕ ಆಹಾರವನ್ನು ನಿರ್ಧರಿಸಿರುತ್ತದೆ. ಪ್ರಾಚೀನಕಾಲದಲ್ಲಿ ನೈಸರ್ಗಿಕವಾಗಿ ಬೆಳೆದಂತಹ ಆಹಾರ ಪದಾರ್ಥಗಳಲ್ಲಿ ಪೌಷ್ಟಿಕತೆ ಇರುತ್ತಿತ್ತು. ನೈಸರ್ಗಿಕ ಬೆಳೆದಂತಹ ಆಹಾರ ಪದಾರ್ಥಗಳ ಸೇವನೆಯಿಂದ ವ್ಯಕ್ತಿಗಳು ಹೆಚ್ಚು

ಬಲಿಷ್ಠರಾಗಿರುತ್ತಿದ್ದರು. ಆಧುನಿಕ ಕಾಲದಲ್ಲಿ ಸಾವಯವ ಕೃಷಿಯನ್ನು ಮಾಡದೆ ತಂತ್ರಜ್ಞಾನದ ಬಳಕೆಯಿಂದಾಗಿ ನೀರಾವರಿ ಸೌಲಭ್ಯವನ್ನು ಪಡೆಯುವುದರಿಂದಾಗಿ ಅನೇಕ ರೀತಿಯ ಔಷಧಿ, ಕೀಟನಾಶಕಗಳನ್ನು ಸಿಂಪಡಿಸುವುದರಿಂದ ಪೌಷ್ಠಿಕ ಆಹಾರ ಧಾನ್ಯಗಳನ್ನು ಬೆಳೆಯಲು ಅಸಾಧ್ಯವಾಗುತ್ತಿದೆ. ತಂತ್ರಜ್ಞಾನದ ಬಳಕೆಯಿಂದಾಗಿ ಬೆಳೆದಂತಹ ಆಹಾರ ಧಾನ್ಯಗಳ ಸೇವನೆಯಿಂದ ವ್ಯಕ್ತಿಯ ಶಾರೀರಿಕ ಬದಲಾವಣೆಯನ್ನು ಹೊಂದುವುದು ಸಹಜವಾಗಿದೆ. ಇಂತಹ ಆಹಾರ ಸೇವನೆಗಳಿಂದ ವ್ಯಕ್ತಿಗಳ ದೈಹಿಕ ಸಾಮಾರ್ಥ್ಯ ಕುಗ್ಗುತ್ತಿದೆ ಮತ್ತು ಬಾರವಾದ ಕೆಲಸವನ್ನು ನಿರ್ವಹಿಸಲು ಸಾಧ್ಯವಾಗದೆ ಇರುವುದರಿಂದ ವ್ಯಕ್ತಿಗಳಲ್ಲಿ ಬಹುಬೇಗನೆ ಮುಪ್ಪಾಗುವಿಕೆಯನ್ನು ಗುರಿತಿಸುತ್ತದೆ. ಸಮರ್ಪಕವಾದಂತ ಪೌಷ್ಠಕ ಆಹಾರದ ಕೊರತೆಯಿಂದ ವ್ಯಕ್ತಿಗಳು ಶಾರೀರಿಕವಾಗಿ ಕುಂದಲು ಅನಿವಾರ್ಯವಾಗಿದೆ. ಇದರಿಂದ ಬಹುಬೇಗನೆ ವೃದ್ಧಾಪ್ಯಕ್ಕೆ ಕಾಲಿಡುತ್ತಾರೆ.

## ಶಾರೀರಿಕ ಸ್ಥಿತಿಗತಿಗಳಿಗೆ ಕಾರಣವಾದ ಅಂಶಗಳು

### 1. ಮಾರಕ ರೋಗಗಳಿಗೆ ತುತ್ತಾಗುವುದು

ಮನುಷ್ಯ ಹುಟ್ಟುವಾಗಲೇ ಸಮಸ್ಯಗಳನ್ನು ಮತ್ತು ರೋಗಗಳನ್ನು ಬೆನ್ನಿಗಂಟಿಕೊಂಡೆ ಹುಟ್ಟುತ್ತಾನೆ. ಸಮಸ್ಯಗಳನ್ನು ಎದುರಿಸುತ್ತಾ ಜೀವನ ನಡೆಸುತ್ತಾನೆ. ಇಂತಹುದುರಲ್ಲಿ ಕಲವೊಂದು ರೋಗಗಳು ವಯಸ್ಸಿನಗನುಗುಣವಾಗಿ ಬರುತ್ತವೆ. ಎಂಥಾ ರೋಗಗಳು ಬರುತ್ತವೆ ಎಂದರೆ ಕೆಲವೊಂದು ರೋಗಗಳಿಗೆ ಹೆಸರೇ ಇರುವುದಿಲ್ಲ ಬಹಳ ದಿನಗಳ ನಂತರ ರೋಗಗಳ ಹೆಸರು ಮತ್ತು ರೋಗಗಳಿಗೆ ಔಷದಿಯನ್ನು ಕಂಡು ಹಿಡಿಯಲಾಗುತ್ತದೆ. ಪ್ರೌಢಾವಸ್ಥೆಯಲ್ಲಿ ಬರುವ ರೋಗಗಳು ಬೇರೆಯಾದರೆ ವೃದ್ದಾಪ್ಯದಲ್ಲಿ ಬರುವ ರೋಗಗಳು ಬೇರೆಯಾಗಿವೆ. ವೃದ್ದಾಪ್ಯದಲ್ಲಿ ಕೆಲವೊಂದು ರೋಗಗಳಿಗೆ ತುತ್ತಾಗಿ ಸಾವಿನಲ್ಲಿ ಅಂತ್ಯ ಕಾಣುವುದು ಕೆಲವೊಂದು ಸತ್ಯ ಸಂಗತಿಯಾಗಿದೆ. ಬಹಳ ಕಾಲದವರೆಗೆ ರೋಗಗಳ ನಡುವೆಯು ಕಾಲಕಳೆಯುವ ವೃದ್ದರು ಕಂಡು ಬರುತ್ತಾರೆ. ಒಂದೊಂದು ರೋಗಗಳು ಒಂದಕೊಂದು ವಿಚಿತ್ರವಾಗಿರುತ್ತವೆ. ರೋಗಗಳು ಹೆಚ್ಚಾಗಿ ವೃದ್ದಾಪ್ಯದಲ್ಲಿ ವೃದ್ದರಲ್ಲಿ ಕಂಡುಬರುವುದು ಸಹಜವಾಗಿದೆ ವೃದ್ದಾಪ್ಯದಲ್ಲಿ ಮೊದಲು ಅಂದತ್ವವನ್ನು ಕಳೆದು ಕೊಳ್ಳುತ್ತಾರೆ. ಇದರಿಂದ ಇಂತಹ ವೃದ್ದರು ಸಮಸ್ಯಗಳನ್ನು ಎದುರಿಸಬೇಕಾಗುವುದು ಯಾವುದೇ ಕಡೆ ತಿರುಗಾಡದೆ ಕೇವಲ ಒಂದು ಪ್ರತ್ಯೇಕ ಕೋಣೆಯಲ್ಲಿ ವಾಸ ಮಾಡುತ್ತಾರೆ. ಇದರಿಂದ ಮತ್ತಿತ್ತರ ರೋಗಗಳಿಗೆ ಬಲಿಯಾಗುತ್ತಾರೆ.

### 2. ಅಂಗವಿಕಲತೆ ಹೊಂದುವುದು

ಪ್ರಾಚೀನ ಕಾಲದಲ್ಲಿ ಪೌಷ್ಠಿಕ ಆಹಾರ ಸೇವನೆಯಿಂದ ಮತ್ತು ನಿರಂತರ ದುಡಿಮೆಯಿಂದ ವ್ಯಕ್ತಿಗಳು ಸಾಕಷ್ಟು ಪ್ರಮಾಣದಲ್ಲಿ ಬಲಿಷ್ಟರಾಗುತ್ತಿದ್ದರು. ಆದುನೀಕರಣದಿಂದ ಪ್ರಸ್ತುತ ಸಮಾಜದಲ್ಲಿ ವಿವಿದ ರೀತಿಯ ರೋಗಗಳ ಉತ್ಪತ್ತಿಯಿಂದ ಮತ್ತು ರಸ್ತೆ ಅಪಘಾತದಿಂದ ಮತ್ಯವುದೋ ಅಕಸ್ಮಿಕ ಕಾರಣದಿಂದ ವ್ಯಕ್ತಿಗಳು ಅಂಗವಿಕಲತೆಯನ್ನು ಹೊಂದುತ್ತಿದ್ದಾರೆ. ವೈದ್ಯಕೀಯ ಕ್ಷೇತ್ರವು ಬೃಹತ್ ಪ್ರಮಾಣದಲ್ಲಿ ಪ್ರಗತಿಹೊಂದುತ್ತಿದ್ದರೂ ಆದರೆ ಕೆಲವೊಂದು ರೋಗಗಳಿಗೆ ಶೀಘ್ರಗತಿಯಲ್ಲಿಯ ಪರಿಹಾರಕಂಡುಕೊಳ್ಳುವಲ್ಲಿ ವಿಫಲತೆ ಹೊಂದುತ್ತಿರುವುದು ಯಾವುದೇ ಒಂದು ಕ್ಷಣದಲ್ಲಿ ಸಂಭವಿಸಿದ ಅಪಘಾತದಲ್ಲಿ ದೇಹದ

ಯಾವುದೇ ಅಂಗಗಳನ್ನು ಕಳದುಕೊಂಡು ಅದಕ್ಕೆ ತಕ್ಕಂತೆ ಯೋಗ್ಯ ರೀತಿಯ ಚಿಕಿತ್ಸೆ ದೊರೆಯದೇ ಇರುವುದರಿಂದ ಮತ್ತು ವೃದ್ದರ ನಿರ್ಲಕ್ಷ್ಯತನದಿಂದ ವೃದ್ಧಾಪ್ಯದಲ್ಲಿ ಕಷ್ಟಗಳನ್ನು ಅನುಭವಿಸಬೇಕಾಗುವುದು. ವೃದ್ದಾಪ್ಯದಲ್ಲಿ ಅಂಗವಿಕಲತೆಯಿಂದ ವೃದ್ದರಲ್ಲಿ ಆಘಾತವನ್ನುಂಟುಮಾಡುತ್ತವೆ. ಇದರಿಂದ ವೃದ್ದರ ಅಂಗವಿಕಲತೆಯು ಬಿಕ್ಷಾಟನೆಗೆ ಕಾರಣವಾಗುತ್ತದೆ.

### 3. ದೃಷ್ಟಿಹೀನತೆ ಕಳೆದುಕೊಳ್ಳವುದು

ವೃದ್ದಾಪ್ಯದಲ್ಲಿ ಮೊದಲಿಗೆ ಕಾಣಿಸಿಕೊಳ್ಳುವುದೇ ದೃಷ್ಟಿಹೀನತೆ. ಇದರಿಂದ ವೃದ್ದರಲ್ಲಿ ನಾವು ಅಂದರು ಅಂದತ್ವಕ್ಕೆ ಗುರುಯಾಗಿದ್ದೇವೆ. ಇನ್ನು ಮುಂದಿನ ಜೀವನ ಹೇಗೆ, ನಮ್ಮನ್ನು ಯಾರು ಆರೈಕೆ ಮಾಡುತ್ತಾರೆ. ಎಂಬ ಅನೇಕ ಯೋಚನೆಗಳು ಮನೆ ಮಾಡಿರುತ್ತವೆ. ಇದರಿಂದ ವೃದ್ದರಲ್ಲಿ ದೈಹಿಕ ಶಕ್ತಿಯು ಕುಗ್ಗುವುದರ ಜೊತೆಗೇ ಮಾನಸಿಕ ನೆಮ್ಮದಿಯು ಇಲ್ಲದಂತಾಗುತ್ತದೆ. ವೃದ್ದಾಪ್ಯದಲ್ಲಿ ವೃದ್ದರಿಗೆ ಮೊದಲು ದೃಷ್ಟಿಯ ಅವಶ್ಯಕತೆ ಇರುತ್ತದೆ. ಇದು ಇಲ್ಲದಿದ್ದರೆ ವೃದ್ದರ ಬದುಕು ಅಂದಕಾರದಲ್ಲಿ ಕಳೆಯುವಂತೆಮಾಡುತ್ತದೆ.ವಯಸ್ಸಾದಂತೆ ಅಂದತ್ವ ಕಳೆದುಕೊಳ್ಳುವುದರ ಜೊತೆಗೆ ಇನ್ನಿತರ ಅನೇಕ ಕಾಯಿಲೆಗಳಿಗೆ ಬಲಿಯಾಗುತ್ತಾರೆ. ಇದರಿಂದ ಶಾರೀರಕ ಸ್ಥಿತಿಗತಿಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬದಲಾವಣೆಯನ್ನುಂಟು ಮಾಡುತ್ತವೆ. ವೃದ್ದಾಪ್ಯದಲ್ಲಿ ವೃದ್ದರಿಗೆ ಕುಟುಂಬದಲ್ಲಿ ಆರೈಕೆಯು ಎಷ್ಟೊಂದು ಪ್ರಾಮುಖ್ಯತೆ ಪಡೆದಿದೆಯೋ ಸಮಾಜದಲ್ಲಿ ಪ್ರತಿಯೊಂದು ಕ್ಷೇತ್ರವು ಅಷ್ಟೇ ಪ್ರಾಮುಖ್ಯತೆಯನ್ನು ಹೊಂದರುತ್ತವೆ. ಶಾರೀರಿಕ ಸ್ಥಿತಿಗತಿಗಳ ಬದಲಾವಣೆ, ಇಲ್ಲಿ ವೈದ್ಯರ ನಿರ್ಲಕ್ಷ್ಯಯು ಒಂದು ಪ್ರಮುಖ ಕಾರಣವಾಗಿರುತ್ತದೆ. ಹೆಚ್ಚಿನ ಪ್ರಮಾಣದಲ್ಲಿ ಅಂದತ್ವ ನಿವಾರಣೆಯಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ವೃದ್ದರ ಬಾಳಿಗೆ ಬೆಳಕನ್ನು ಕೊಡುವುದಕ್ಕೆ ಹೆಚ್ಚಿನ ಒತ್ತುಕೊಡಬೇಕಾಗಿದೆ.

### 4. ವೈದ್ಯರು ಸರಿಯಾದ ಸಮಯಕ್ಕೆ ಬಾರದಿರುವುದು.

ಪುರತಾನ ಕಾಲದಲ್ಲಿ ಯಾವುದೇ ವ್ಯಕ್ತಿಯು ಯಾವುದೇ ಒಂದು ಕಾಯಿಲೆಗೆ ತುತ್ತಾದರೆ ಆಯುರ್ವೇದಿಕ ಅಥವ ಗಿಡಮೂಲಿಕೆಯ ಔಷದಿಯಿಂದ ಗುಣ ಪಡಿಸುತ್ತಿದ್ದರು. ಕಾಲ ಬದಲಾವಣೆಯಿಂದ ಆಯುರ್ವೇದಿಕ ಔಷದಿಗಳು ಗಿಡ ಮೂಲಿಕೆಯಂಹ ಔಷದಿಗಳು

ಮಾಯವಾಗತೊಡಗಿದ್ದವು. ವೈದ್ಯಕೀಯ ರಂಗ ತೀವ್ರಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿರುವುದರಿಂದ ಯಾವುದೇರೀತಿಯ ಕಾಯಿಲೆಗಳನ್ನು ಗುಣಪಡಿಸಬಹುದಾದ ಪರಿಸ್ಥಿತಿ ನಿರ್ಮಾಣವಾಗಿದೆ. ವೈದ್ಯಕೀಯ ರಂಗದಲ್ಲಿ ಎಷ್ಟು ಪ್ರಾಮುಖ್ಯತೆ ಹೊಂದಿದೆಯೋ ಆಧುನಿಕ ಸಮಾಜದಲ್ಲಿ ಅದರಲ್ಲಿ ಗ್ರಾಮಂತರ ಪ್ರದೇಶದಲ್ಲಿ ಗೆಡಮೂಲಿಕೆಯ ಔಷದಿಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಹೊಂದಿದೆ. ನಗರ ಪ್ರದೇಶಗಳಲ್ಲಿ ಕೆಲವೊಂದು ಸಾರ್ವಜನಿಕ ಆಸ್ಪತ್ರೆಯಲ್ಲಿ ಸರಿಯಾದ ಸಮಯಕ್ಕೆ ವೈದ್ಯರು ಬಾರದಿರುವುದು ಬಂದರೂ ಯೋಗ್ಯರೀತಿಯ ಚಿಕಿತ್ಸೆ ನೀಡದಿರುವುದು ವೃದ್ಧರಲ್ಲಿ ಆತಂಕ ಮೂಡಿಸಿದೆ. ಕೆಲವೊಂದು ಶ್ರೀಮಂತ ಕುಟುಂಬದಲ್ಲಿ ಇರುವಂತಹ ವೃದ್ಧರು ಖಾಸಗಿ ವೈಧ್ಯರ ಬಳಿ ತಮ್ಮ ತಮ್ಮ ಕಾಯಿಲೆಗಳಿಗೆ ಚಿಕಿತ್ಸೆ ಪಡೆದುಕೊಂಡು ಗುಣ ಮುಖರಾದರೆ ಬಡಕುಟುಂಬದ ವೃದ್ಧರು ಕೇವಲ ಸರಕಾರಿ ಆಸ್ಪತ್ರೆಯ ವೈದ್ಯರನ್ನು ಮಾತ್ರ ಅವಲಂಬಿಸಿರುತ್ತಾರೆ. ಕೆಲವೊಂದು ಸರಕಾರಿ ವೈದ್ಯರು ಹಣಗಳಸುವ ನೆಪದಲ್ಲಿ ಖಾಸಗಿಯಾಗಿ ಆಸ್ಪತ್ರೆಯನ್ನು ಹೊಂದಿದು ಅವರು ಸರಿಕಾರಿ ಸಲ್ಲಿಸಬೇಕಾಗಿದ್ದ ವೈದ್ಯಕೀಯ ಸೇವೆಯನ್ನು ತಮ್ಮ ವೈಯಕ್ತಿಕ ಆಸೇಗೆ ಹೆಚ್ಚಿನ ಬಲವ್ನು ತೋರಿಸುತ್ತಾರೆ. ಇದರಿಂದ ಸರಕಾರಿ ಆಸ್ಪತ್ರೆಗೆ ವೈದ್ಯರು ಸರಿಯಾದ ಸಮಯಕ್ಕೆ ಬಾರದಿರುವುದು ಕಂಡುಬರುತ್ತಿದೆ. ಇದರಿಂದ ಸರಕಾರಿ ವೈದ್ಯಕೀಯ ಸೇವೆಯನ್ನು ಅವಲಂಬಿಸಿರುವವರಿಗೆ ಅದು ಮರೀಚಿಕೆಯಾಗಿದೆ. ಇದರಿಂದ ವೃದ್ಧಾಪ್ಯದಲ್ಲಿ ವಯೋವೃದ್ಧರು ಇದನ್ನು ಹೆಚ್ಚಿನ ಪ್ರಮಾಣದಲ್ಲಿ ಅನೇಕ ಮಾರಕ ರೋಗಗಳಿಗೆ ತುತ್ತಾಗಿ ಬಲಿಯಾಗುವುದನ್ನು ಕಾಣ ಬಹುದಾಗಿದೆ. ಇದರಿಂದ ವಯೋವೃದ್ಧರ ಶಾರೀರಿಕ ಸ್ಥಿತಿಗತಿಗಳಿಗೆ ವೈದ್ಯರು ಪ್ರಮುಖ ಕಾರಣರಾಗಿರುತ್ತಾರೆ.



## 5. ದೈಹಿಕ ಶಕ್ತಿ ಕಳೆದುಕೊಳ್ಳುವುದು

ಸಂಪ್ರದಾಯಕ ಕುಟುಂಬಗಳಲ್ಲಿ ವೃದ್ಧರ ದೈಹಿಕ ಶಕ್ತಿಯು ಉತ್ತಮವಾಗಿರುತ್ತಿತ್ತು ಪುರಾತನ ಕಾಲದಲ್ಲಿ ನೈಸರ್ಗಿಕವಾಗಿ ಬೆಳೆದಂತ ಆಹಾರ ಪದಾರ್ಥಗಳ ಸೇವನೆಯಿಂದ ಅರವತ್ತರಿಂದ 70ವರ್ಷವಾದರೂ ಇನ್ನೂ ನವತರುಣರಂತೆ ಕಾಣುತ್ತಿದ್ದರು. ಮತ್ತು

ದುಡಿಯಲು ಬಾರವಾದ ಕೆಲಸಗಳನ್ನು ನಿರ್ವಹಿಸಲು ಹೆಚ್ಚು ಸಮರ್ಥರಾಗಿರುತ್ತಿದ್ದರು ಮತ್ತು ವೃದ್ಧರ ಆಯುಷ್ಯ ನೂರರ ಗಡಿ ದಾಟಿದ ವೃದ್ಧರನ್ನು ಕಾಣುತ್ತಿದ್ದರು ಅವರಿಗೆ ಆರೈಕೆ, ರಕ್ಷಣೆಯು ಪ್ರತಿಯೊಂದು ಕುಟುಂಬದಲ್ಲಿ, ಸಮಾಜದಲ್ಲಿ, ಸಕಾಲಕ್ಕೆ ದೊರೆಯುತ್ತಿದ್ದವು. ಕುಟುಂಬಗಳ ಶಿಥಿಲತೆಯಿಂದ ವೃದ್ಧರು ಹೀನಾಯ ಸ್ಥಿತಿಗತಿಳಿಗೆ ತಲುಪಿರುತ್ತಾರೆ. ಕೃಷಿ ಕ್ಷೇತ್ರವು ಬಹಳಷ್ಟು ಪ್ರಮಾಣದಲ್ಲಿ ಪ್ರಗತಿಹೊಂದಿ ರೈತರು ವಾಣಿಜ್ಯಗಳನ್ನು ಮಾತ್ರ ಬೆಳೆಯುತ್ತಿರುವುದು ಕಂಡು ಬರುತ್ತದೆ. ತಂತ್ರಜ್ಞಾನದ ಬಳಕೆಯಿಂದ ರೈತರು ಮತ್ತು ವ್ಯಕ್ತಿಗಳು ತಮ್ಮ ದೈಹಿಕ ಶಕ್ತಿಯನ್ನು ಬಳಸದೇ ಯಂತ್ರಗಳ ಮುಖಾಂತರ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ. ಅಪೌಷ್ಟಿಕತೆ ಆಹಾರ ಪದಾರ್ಥಗಳನ್ನು ಬೆಳೆದು ಅದರ ಸೇವನೆಯಿಂದ ವ್ಯಕ್ತಿಯು ಬಹುಬೇಗನೆ ಮುಪ್ಪಿನ ವಯಸ್ಸನ್ನು ತಲುಪುತ್ತಿದ್ದಾನೆ. ನಲವತ್ತು ವಯಸ್ಸಾದ ವ್ಯಕ್ತಿಗಳು ಇಂದು ಎಪ್ಪತ್ತು ವಯಸ್ಸಾದಂತೆ ಕಾಣಿಸಿಕೊಳ್ಳತ್ತಿದ್ದಾರೆ ಸೋಮಾರಿತನಕ್ಕೆ ಬಲಿಯಾಗಿದ್ದಾರೆ. ಕೆಲವೊಂದು ದುಶ್ಚಟಗಳನ್ನು ಕಲಿತುಕೊಂಡು ನಾಗರೀಕ ಸಮಾಜವನ್ನು ಹಾಳುಮಾಡುತ್ತಿದ್ದಾರೆ. ಇದರಿಂದ ಮನುಷ್ಯರಲ್ಲಿ ದೇಹದ ಶಕ್ತಿಯು ಬಹುಬೇಗನೆ ಕಳೆದುಕೊಳ್ಳುತ್ತಾರೆ. ವೃದ್ಧಾಪ್ಯದಲ್ಲಿ ದೈಹಿಕ ಶಕ್ತಿ ಕಳೆದುಕೊಳ್ಳುವುದರಿಂದ ಅವರು ಪರಾವಲಂಬಿಗಳಾಗಿರುತ್ತಾರೆ. ಮತ್ತು ಇತರರ ಮೇಲೆ ಆರ್ಥಿಕ ಹೊರೆಯನ್ನು ಹಾಕುತ್ತಾರೆ. ತಮ್ಮ ಮುಪ್ಪಿನ ಜೀವನವನ್ನು ಸಂಪೂರ್ಣವಾಗಿ ಕುಟುಂಬದ ಸದಸ್ಯರನ್ನು ಅವಲಂಬಿಸಬೇಕಾಗುತ್ತದೆ.

**ಶಾರೀರಿಕ ಲಕ್ಷಣಗಳು :**

1. ಒರಟಾದ ಚರ್ಮ
2. ಕಾಂತಿ ಹೀನ ಮುಖ
3. ಬಿಳಿಯಾದ ಕೂದಲುಗಳು
4. ಮಾಂಸಕಂಡಗಳಲ್ಲಿ ಶಕ್ತಿ ಇಲ್ಲದಿರುವುದು
5. ಅಲ್ಲು ಬೀಳುವುದು
6. ದೃಷ್ಟಿ ಹೀನತೆ
7. ಶ್ರವಣ ಶಕ್ತಿ ಕಡಿಮೆಯಾಗುವುದು, ಬೆನ್ನು ನೋವು, ಸಂಧುನೋವು, ಕೈಕಾಲುಗಳು ನಡುಗುವುದು, ಮುಂತಾದವುಗಳು ವ್ಯಕ್ತಿಗಳಲ್ಲಿ ಮತ್ತು ವಯೋವೃದ್ಧರಲ್ಲಿ ಕಂಡುಬರುವ ಲಕ್ಷಣಗಳಾಗಿವೆ.

ಇದರಿಂದ ವಯೋವೃದ್ಧರು ಇಂತ ಕೆಲವೊಂದು ಲಕ್ಷಣಗಳಿಗೆ ತುತ್ತಾಗಿ ಮತ್ತು ಕೆಲವೊಂದು ರೋಗಗಳಿಗೆ ಬಲಿಯಾಗಿ ಸಮಾಜದಲ್ಲಿ ಕೀಳು ಭಾವನೆಗಳಿಗೆ ಒಳಗಾಗುತ್ತಾರೆ. ಇದರಿಂದ ವಯೋವೃದ್ಧರ ಸ್ಥಿತಿ ಗತಿಗಳ ಏರು ಪೇರುಗಳಲ್ಲಿ ಶಾರೀರಿಕ ಸ್ಥಿತಿಗತಿಯು ಒಂದು ಪ್ರಮುಖ ಪಾತ್ರವನ್ನು ವಹಿಸುತ್ತದೆ.

## ಅಡಿ ಟಿಪ್ಪಣೆಗಳು

1. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ–55

2. ಪ್ರೋ. ಕೆ. ಬೈರಪ್ಪ – ಭಾರತದ ಪ್ರಚಲಿತ ಸಾಮಾಜಿಕ ಸಮಸ್ಯೆಗಳು – 2006 ಸ್ವಪ್ನ ಬುಕ್ ಹೌಸ್ ಬೆಂಗಳೂರು. ಪು.ಸಂ–32

3. ಪ್ರೋ. ಕೆ. ಬೈರಪ್ಪ – ಪ್ರಚಲಿತ ಸಾಮಾಜಿಕ ಸಮಸ್ಯೆಗಳು – 2006 ಸ್ವಪ್ನ ಬುಕ್ ಹೌಸ್ ಬೆಂಗಳೂರು. ಪು.ಸಂ–30

4. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ–66

5. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ–66

6. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ–66

7. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ–83

# ಅಧ್ಯಾಯ 4

## ವಯೋವೃದ್ಧರ ಸಮಸ್ಯೆಗಳು

**4.1 ವಯೋವೃದ್ಧರ ಸಮಸ್ಯೆಗಳಿಗೆ ಕಾರಣಗಳು**

**4.2 ವಯೋವೃದ್ಧರ ಸಮಸ್ಯೆಗಳಿಗೆ ಪರಿಹಾರೋಪಾಯಗಳು**

**4.3 ವಯೋವೃದ್ಧರ ಜೀವನ ವೃತ್ತಾಂತಗಳು**

# ವಯೋವೃದ್ಧರ ಸಮಸ್ಯೆಗಳು

## ೪.೧ – ವಯೋವೃದ್ಧರ ಸಮಸ್ಯೆಗಳಿಗೆ ಕಾರಣಗಳು :

ಸಾಮಾನ್ಯವಾಗಿ ಪ್ರತಿಯೊಂದು ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯಲ್ಲಿ ಸಮಸ್ಯೆಗಳು ಕಾಣುವುದು ಸಾಮಾನ್ಯ ಸತ್ಯಸಂಗತಿ. ಸಮಸ್ಯೆಗಳು ಎದುರಿಸುತ್ತಾ ಜೀವನ ಸಾಗಿಸುವುದು ಒಂದು ಪ್ರವೃತ್ತಿಯನ್ನಾಗಿ ಮಾಡಿಕೊಂಡಿರಬೇಕು. ಇತ್ತೀಚಿನ ದಿನಗಳಲ್ಲಿ ವಯೋವೃದ್ದರ ಸಮಸ್ಯೆಗಳು ಮತ್ತು ಸಮಸ್ಯೆಗಳಿಗೆ ಕಾರಣಗಳು ಹೆಚ್ಚುತ್ತಲೇ ಇವೆ. ಕೆಲವೊಂದು ಸಮಸ್ಯೆಗಳಿಗೆ ಶಾಶ್ವತವಾಗಿ ಪರಿಹಾರಗಳನ್ನು ಕಂಡುಕೊಳ್ಳುತ್ತಿದ್ದರು ಕೆಲವೊಂದು ಸಮಸ್ಯೆಗಳು ಸಮಸ್ಯೆಗಳಾಗಿಯೇ ಉಳಿದುಕೊಂಡಿರುತ್ತವೆ. ಸಂಪೂರ್ಣವಾಗಿ ವಯೋವೃದ್ದರ ಸಮಸ್ಯೆಗಳಿಗೆ ಶಾಶ್ವತ ಪರಿಹಾರೋಪಾಯಗಳನ್ನು ಕಂಡುಕೊಳ್ಳುವ್ಯದು ಅಗತ್ಯವಾಗಿರುತ್ತದೆ.

**ವಯೋವೃದ್ಧರ ಸಮಸ್ಯೆಗಳಿಗೆ ಕಾರಣಗಳು :**

೧. ಕುಟುಂಬಗಳ ವಿಘಟನೆ.

೨. ಪೌಷ್ಠಿಕ ಆಹಾರದ ಕೊರತೆ.

೩. ಅಂಗವಿಲತೆ.

೪. ಅನಾರೋಗ್ಯ

೫. ಮಾನಸಿಕ ಅಸ್ತವ್ಯಸ್ತ.

೬. ಉದ್ಯೋಗದ ಸಮಸ್ಯೆ

೭. ಏಕಾಂಗಿತನ.

ವಯೋವೃದ್ಧರ ಸಮಸ್ಯೆಗಳಿಗೆ ನಾನಾ ರೀತಿಯ ಕಾರಣಗಳನ್ನು ಹೇಳಬಹುದು. ಮತ್ತು ಗುರುತಿಸಬಹುದು. ಪ್ರಸ್ತುತ ಸಮಾಜದಲ್ಲಿ ಪ್ರತಿನಿತ್ಯ ಒಂದಲ್ಲಾ ಒಂದು ರೀತಿಯ ಕಾರಣಗಳಿಂದ ವಯೋವೃದ್ಧರ ಸ್ಥಿತಿಗತಿಗಳಲ್ಲಿ ನಿರಂತರವಾಗಿ ಮತ್ತು ತೀವ್ರಗತಿಯಲ್ಲಿ ಬದಲಾವಣೆಗಳನ್ನು ಕಾಣಬಹುದು ಅಂತಹದರಲ್ಲಿ ಪ್ರಥಮವಾಗಿ ಕುಟುಂಬಗಳ ವಿಘಟನೆ ಒಂದು ಪ್ರಮುಖ ಪಾತ್ರವನ್ನು ವಹಿಸುತ್ತದೆ.

**೧. ಕುಟುಂಬಗಳ ವಿಘಟನೆ :**

ಕುಟುಂಬಗಳು ವೃದ್ಧರ ಆಶ್ರಯತಾಣವಾಗಿದ್ದ ಒಂದು ಕಾಲವಿತ್ತು. ಸಮಾಜ ಬದಲಾವಣೆಯಿಂದ ಮತ್ತು ಕುಟುಂಬಗಳ ವಿಘಟನೆಯಿಂದ ಸಮಾಜದಲ್ಲಿ ವ್ಯಕ್ತಿಗಳು ಬಹುಬೇಗನೇ ಮುಪ್ಪಾಗುವಿಕೆಗೆ ಕುಟುಂಬಗಳ ವಿಘಟನೆಯು ಒಂದು. ಸಂಸಾರಸಾಗರದಲ್ಲಿ ಈಜಿ ಮಕ್ಕಳ ಭವಿಷ್ಯವನ್ನು ರೂಪಿಸುವ ಸಲುವಾಗಿ ಕಷ್ಟ ದುಃಖಗಳನ್ನು ಸಮನಾಗಿ ಸ್ವೀಕಾರ ಮಾಡಿ ಮುಪ್ಪಿನ ವಯಸ್ಸು ಸಮೀಪಿಸುತ್ತಿದ್ದಂತೆ ಮಕ್ಕಳು ತಮ್ಮ ವಯಕ್ತಿಕ ಆಸೆ ಆಕಾಂಕ್ಷೆಗಳನ್ನು ಈಡೇರಿಸಿ ಕೊಳ್ಳುವುದುಗೋಸ್ಕರ ಮತ್ತು ಸ್ವಾರ್ಥ ಮನೋಭಾವನೆ ಹೊಂದಿ ಜನ್ಮ ನೀಡಿದ ತಂದೆ-ತಾಯಿಗಳನ್ನು ಮನೆಯಿಂದ ಹೊರಹಾಕುವುದರಿಂದ ಮಾನಸಿಕವಾಗಿ ಅಸ್ತವ್ಯಸ್ತರಾಗುತ್ತಾರೆ ಮತ್ತು ಚಿಂತೆಯ ಮಡುವಿನಲ್ಲಿ ಬಿದ್ದು ಆಶ್ರಯ ಕಾಣದೆ ಹನ್ನೊಂದು ದಿನ ಬದುಕುವ ವ್ಯಕ್ತಿ ಒಂದೇ ದಿನದಲ್ಲಿ ಸಾವಿಗೆ ಹತ್ತಿರವಾಗುತ್ತಾನೆ.

ಕುಟುಂಬದ ಸದಸ್ಯರುಗಳ ಆರೈಕೆ ಉತ್ತಮವಾಗಿದ್ದರೆ, ಮಕ್ಕಳ ಜೊತೆಯಲ್ಲಿ ಮೊಮ್ಮೊಕ್ಕಳ ಪ್ರೀತಿ ವಾತ್ಸಲ್ಯದಲ್ಲಿ ಇದ್ದರೆ ಅವರು ನೆಮ್ಮದಿಯ ಜೀವನದಿಂದ ಇನ್ನೂ ನವಚೇತನ ತರುಣರಾಗಿರಬಹುದು. ಆದರೆ ಇತ್ತೀಚಿನ ದಿನಗಳಲ್ಲಿ ಅದರಲ್ಲೂ ಆಧುನಿಕ ಸಮಾಜದಲ್ಲಿ ಅವಿಭಕ್ತ ಕುಟುಂಬ ನಗರ ಪ್ರದೇಶಗಳಲ್ಲಾಗಲಿ ಅಥವಾ ಗ್ರಾಮೀಣ

ಪ್ರದೇಶಗಳಲ್ಲಾಗಲಿ ಕಂಡುಬರುತ್ತಿಲ್ಲ. ಅವಿಭಕ್ತ ಕುಟುಂಬಗಳು ವೃದ್ಧರಿಗೆ ಆಶ್ರಯ ಮತ್ತು ಆರೈಕೆ ಮಾಡುವಲ್ಲಿ ಅಥವಾ ನೀಡುವಲ್ಲಿ ಪ್ರಮುಖ ಪಾತ್ರಗಳನ್ನು ವಹಿಸುತ್ತಿದ್ದವು. ಕುಟುಂಬಗಳ ವಿಘಟನೆಯಿಂದ ವೃದ್ಧರ ಸಮಸ್ಯೆಗಳಿಗೆ ಇದು ಒಂದು ಪ್ರಮುಖ ಕಾರಣವಾಗಿದೆ.

**೨. ಪೌಷ್ಠಿಕ ಆಹಾರದ ಕೊರತೆ :**

ವಯೋವೃದ್ಧರ ಸಮಸ್ಯೆಗಳಿಗೆ ಇನ್ನೊಂದು ಪ್ರಮುಖ ಕಾರಣವೆಂದರೆ ಪೌಷ್ಠಿಕ ಆಹಾರದ ಕೊರತೆ ಒಂದು. ಪ್ರಾಚೀನ ಕಾಲದಲ್ಲಿ ಕೇವಲ ಸಾವಯವ ಕೃಷಿಯಿಂದ ಬೆಳೆದ ಆಹಾರ ಧಾನ್ಯಗಳು ಬಹಳ ಪೌಷ್ಠಿಕತೆಯಿಂದ ಕೂಡಿರುತ್ತಿತ್ತು. ಮಳೆಯ ನೀರಿನಿಂದ ಮತ್ತು ದನಗಳ ಮಲಮೂತ್ರ (ಸಗಣಿ)ಯಿಂದ ನೈಸರ್ಗಿಕವಾಗಿ ಭೂಮಿಯು ಹೆಚ್ಚು ಫಲವತ್ತತೆಯಿಂದ ಕೂಡಿದ್ದು ಅಧಿಕವಾಗಿ ಯಾವುದೇ ಯಂತ್ರಗಳ ಬಳಕೆಯಿಲ್ಲದೆ ದೈಹಿಕ ಶ್ರಮದಿಂದ ಕೃಷಿ ಚಟುವಟಿಕೆಯಲ್ಲಿ ತೊಡಗಿರುವ ಒಂದು ಕಾಲವಿತ್ತು. ಅಂತಹ ಬೆಳೆಗಳ ಧಾನ್ಯಗಳಿಂದ ಮಾಡಿದ ಆಹಾರ ಸೇವನೆಯಿಂದ ವ್ಯಕ್ತಿಗಳು ದೈಹಿಕವಾಗಿ, ಶಾರೀರಿಕವಾಗಿ ಹೆಚ್ಚು ಬಲಿಷ್ಠರಾಗಿದ್ದರು.

ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಅವಿಭಕ್ತ ಕುಟುಂಬಗಳು ಕಂಡುಬರುತ್ತಿದ್ದವು. ಅಂತಹ ಕುಟುಂಬಗಳಲ್ಲಿ ವೃದ್ಧರಿಗೆ ಗೌರವ ಮತ್ತು ಆರೈಕೆಯು ಉತ್ತಮವಾಗಿತ್ತು. ಆಧುನಿಕ ಸಮಾಜದಲ್ಲಿ ಹೊಸ ಹೊಸ ವಿಷಯಗಳ ಅವಿಷ್ಕಾರಗಳು ಉದ್ಭವಿಸಿ ನಾನಾ ರೀತಿಯ ಯಂತ್ರಗಳಬಳಕೆಯಿಂದ ಉತ್ತಮ ಗುಣಮಟ್ಟದ ಕೀಟನಾಶಕ ಮತ್ತು ಬೀಜಗಳ ಕೊರತೆಯಿಂದ ಪೌಷ್ಠಿಕತೆಯ ಆಹಾರ ಧಾನ್ಯಗಳನ್ನು ಬೆಳೆಯಲು ಸಾಧ್ಯವಾಗುತ್ತಿಲ್ಲ. ವ್ಯಕ್ತಿಗಳು ಸರಕಾರದ ಬೆಳೆಗಳನ್ನು ಬೆಳೆಯದೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ನೀರಾವರಿ ಯೋಜನೆಯ ಉಪಯೋಗದಿಂದ (ಜೋಳ, ತೊಗರಿ, ರಾಗಿ, ಸಜ್ಜೆ, ಮೆಕ್ಕೆಜೋಳ ಮುಂತಾದವುಗಳು) ಇಂತಹ ಬೆಳೆಗಳನ್ನು ಬೆಳೆಯದೆ ಹತ್ತಿ, ಭತ್ತ, ಮೆಣಸಿನಕಾಯಿ, ಮುಂತಾದ ಬೆಳೆಗಳು ಬೆಳೆದು ವ್ಯಕ್ತಿಗಳು ಆರ್ಥಿಕವಾಗಿ ಪ್ರಬಲರಾಗುತ್ತಾರೆ. ದೈಹಿಕವಾಗಿ ಶ್ರಮವನ್ನು ಮಾಡದೇ ಯಂತ್ರಗಳ ಉಪಯೋಗದಿಂದ ತನ್ನಲ್ಲಿರುವ ಶಕ್ತಿಯನ್ನು ನಾಶಗೊಳಿಸಿ ಕೊಳ್ಳುತ್ತಿದ್ದಾರೆ. ಇದರಿಂದ ಪೌಷ್ಠಿಕ

ಆಹಾರದ ಕೊರತೆ ಮತ್ತು ಶಾರೀರಿಕ ಶ್ರಮ ಮಾಡದೆ ಇರುವುದು ಬೇಗನೆ ಮುಪ್ಪಿನ ವಯಸ್ಸಿಗೆ ಬರುವುದು ಸಹಜ ಪ್ರವೃತ್ತಿಯಾಗಿದೆ.

### ೩. ಅಂಗವಿಕಲತೆ :

ಅಂಗವಿಕಲತೆ ವಯೋವೃದ್ಧರ ಸಮಸ್ಯೆಗಳಿಗೆ ಒಂದು ಕಾರಣವಾದ ಅಂಶವಾಗಿದೆ. ಪೌಷ್ಠಿಕ ಆಹಾರದ ಕೊರತೆಯಿಂದ ಹೊಸ ಹೊಸ ರೋಗಗಳ ಉದ್ಬವದಿಂದ ಇಂದು ಅನೇಕ ಮಾರಕ ರೋಗಗಳಿಗೆ ತುತ್ತಾಗಿ, ಶಾರೀರಿಕವಾಗಿ ವ್ಯಕ್ತಿಗಳು ಅಂಗವಿಕಲತೆಯನ್ನು ಹೊಂದುತ್ತಿದ್ದಾರೆ. ಕ್ಷಣ ಕ್ಷಣಕ್ಕೆ ನೆಡೆಯುವ ಅಪಘಾತಗಳು, ಅಂಧತ್ವ ಕಳೆದುಕೊಳ್ಳುವುದು, ಆಸ್ತಿ ಜಗಳ, ನಿವಾರಿಸುವುದಕ್ಕೆ ಸಾಧ್ಯವಾಗದಂತಹ ಭಯಾನಕ ರೋಗಗಳು, ಇಂದು ಪ್ರಸ್ತುತ ಸಮಾಜದಲ್ಲಿ ಕಂಡುಬರುತ್ತಿವೆ. ವೈದ್ಯಕೀಯ ಕ್ಷೇತ್ರದಲ್ಲಿ ಪ್ರಗತಿ ಹೊಂದಿದ್ದರೂ ಕೆಲವೊಂದು ರೋಗಗಳಿಗೆ ಔಷಧಿ ಕಂಡುಕೊಳ್ಳುವಲ್ಲಿ ವಿಫಲತೆಯನ್ನು ಹೊಂದಿರುತ್ತದೆ. ಕೆಲವೊಂದು ಘಟನೆಗಳು ನೆಡೆಯುವುದರಿಂದ ವ್ಯಕ್ತಿಗಳು ಅಂಗವಿಕಲತೆ ಹೊಂದಿ ತೀವ್ರಗತಿಯಲ್ಲಿ ಮುಪ್ಪಾಗುವಿಕೆಗೆ ಕಾರಣವಾಗಿರುತ್ತದೆ.

### ೪. ಅನಾರೋಗ್ಯ :

ವಯೋವೃದ್ಧರಿಗೆ ಕಾಡುವ ಇನ್ನೊಂದು ಸಮಸ್ಯೆಯೆಂದರೆ ಅನಾರೋಗ್ಯ. ಮುಪ್ಪಿನಲ್ಲಿ ಪ್ರತಿಯೊಬ್ಬ ವೃದ್ದರಿಗೆ ಒಂದಲ್ಲಾ ಒಂದುರೀತಿಯಲ್ಲಿ ಸಮಸ್ಯೆ ಎದ್ದು ಕಾಣುತ್ತದೆ. ಅದರಲ್ಲೂ ಅನಾರೋಗ್ಯ ಒಂದು ಪ್ರಮುಖವಾದದ್ದು. ಜೀವನದುದ್ದಕ್ಕೂ ಬಾಳಿಬದುಕಿದ ವ್ಯಕ್ತಿ ಮುಪ್ಪು ಸಮೀಪಿಸುತ್ತಿದ್ದಂತೆ ಆರೋಗ್ಯದಲ್ಲಿ ಕೆಲವೊಂದು ರೋಗಗಳು ಉದ್ಭವಿಸ ತೊಡಗುತ್ತವೆ. ಕಿವುಡುತನ, ಬುದ್ಧಿಮಾಂಧ್ಯತೆ, ರಕ್ತದ ಒತ್ತಡ, ಸಕ್ಕರೆ ಕಾಯಿಲೆ, ನಡುಗುವುದು, ದೃಷ್ಠಿಹೀನತೆ, ಅತೀಯಾದ ಚಿಂತೆ, ಏಕಾಂಗಿತನ ಇನ್ನಿತರ ಸಮಸ್ಯೆಗಳು ಕಾಣಿಸಿಕೊಳ್ಳುತ್ತವೆ. ಇಂತಹ ಸಮಸ್ಯೆಗಳಿಗೆ ವೈದ್ಯಕೀಯ ಸೇವೆಯನ್ನು ನೀಡಿದರೂ ಕೆಲವೊಂದು ಮಾನವೀಯತೆ

ಮೌಲ್ಯಗಳಿಂದ ವಯೋವೃದ್ಧರನ್ನು ಆದರದಿಂದ ನೋಡಿಕೊಳ್ಳುವುದು, ಗೌರವದಿಂದ ಕಾಣುವುದು, ಆರೈಕೆ ಮಾಡುವುದು, ಆಶ್ರಯ ನೀಡುವುದು, ಮುಂತಾದವುಗಳಿಂದ ವಯೋವೃದ್ಧರ ಆರೋಗ್ಯವನ್ನು ಸ್ವಲ್ಪ ಪ್ರಮಾಣದಲ್ಲಿ ಸುಧಾರಣೆ ಮಾಡಬಹುದು. ಇಂತಹ ಒಂದು ಆರೋಗ್ಯದ ಸಮಸ್ಯೆಗಳಿಂದ ಬೇಗನೆ ವೃದ್ಧಾಪ್ಯಕ್ಕೆ ವ್ಯಕ್ತಿಗಳು ಕಾಲಿಟ್ಟು ಬಿಡುತ್ತಾರೆ. ಪಿಂಚಣಿದಾರ ವೃದ್ಧರು ಆರ್ಥಿಕವಾಗಿ ಉತ್ತಮವಾಗಿರುವುದರಿಂದ ಅವರ ಆರೋಗ್ಯದಲ್ಲಿ ವ್ಯತ್ಯಾಸ ಕಂಡುಬಂದರೆ ಆಸ್ಪತ್ರೆಗೆ ಮತ್ತು ವೈದ್ಯರ ಬಳಿ ಹೇಳಿಕೊಂಡು ಗುಣಮುಖರಾಗುತ್ತಾರೆ. ಆದರೆ ಸಾಮಾನ್ಯ ವೃದ್ಧರ ಸ್ಥಿತಿ ಚಿಂತಾಜನಕವಾಗಿರುತ್ತದೆ.

'ವೃದ್ಧಾಪ್ಯದಲ್ಲಿ ಮಾನವನಿಗೆ ಬರುವ ಆರೋಗ್ಯಕ್ಕೆ ಸಂಬಂಧಿಸಿದಂತೆ ತೊಂದರೆಗಳೆಂದರೆ ನಿಶ್ಶಕ್ತಿ, ದೃಷ್ಟಿಮಾಂಧ್ಯ ಹಾಗೂ ಶ್ರವಣ ತೊಂದರೆ, ಅಂಗಾಂಗಗಳ ನೋವು, ನಿದ್ರೆ ಕಡಿಮೆ, ಹಸಿವೆಯಾಗದಿರುವುದು, ರಕ್ತ ಒತ್ತಡ, ಸಕ್ಕರೆಕಾಯಿಲೆ, ಮಲಮೂತ್ರ ವಿಸರ್ಜನೆಗೆ ಮತ್ತು ಉಸಿರಾಟಕ್ಕೆ ಸಂಬಂಧಿಸಿದ ರೋಗಗಳು ಸಾಮಾನ್ಯ. ವಿಶೇಷವಾಗಿ ಕಾಣಿಸಿಕೊಳ್ಳುವ ರಕ್ತ ಒತ್ತಡ, ದೈಹಿಕ ಹಾಗೂ ಮಾನಸಿಕ ಎರಡೂ ಕಾರಣಕ್ಕೆ ಬರುತ್ತವೆ. ವೃದ್ಧಾಪ್ಯದಲ್ಲಿ ಇವು ಇನ್ನೂ ಅನೇಕ ಸಮಸ್ಯೆಗಳನ್ನು ತರುತ್ತವೆ. ತಾರುಣ್ಯದಲ್ಲಿ ಬೀಡಿ ಹಾಗೂ ಸಿಗರೇಟು ಸೇದುವುದು, ಮಲೀನವಾದ ವಾತವರಣದಲ್ಲಿ ವಾಸ ಮಾಡುವುದು, ರಾಸಾಯನಿಕ ವಸ್ತುಗಳ, ಧೂಳು ಮುಂತಾದವು ತುಂಬಿದ ಕಡೆ ಕೆಲಸ ಮಾಡುವವರಿಗೆ ಕಾಯಿಲೆ ಬರುವುದು ಸಾಮಾನ್ಯ.[1]

'ಜೀರ್ಣಾವಸ್ಥೆಯಲ್ಲಿರುವ ವೃದ್ಧರು ಹಲವಾರು ರೋಗಗಳಿಂದ ಬಳಲುತ್ತಾರೆ. ಕೆಮ್ಮು-ದಮ್ಮುಗಳು ಅವರ ಬಾಳಸಂಜೆಯ ಸಂಗಾತಿಗಳಾಗಿರುತ್ತವೆ. ಅಜೀರ್ಣ, ಅಂಧತ್ವ ಅವರನ್ನು ಕಾಡುತ್ತವೆ. ಹಲವಾರು ರೋಗಗಳಿಗೆ ತುತ್ತಾದ ವೃದ್ಧರಿಗೆ ಔಷದೀಯ ವ್ಯವಸ್ಥೆಯ ತೊಂದರೆಗಳು ಕಂಡುಬರುತ್ತವೆ. ಅನಾರೋಗ್ಯಕ್ಕೆ ಈಡಾದ ವೃದ್ಧರಿಗೆ ಸೂಕ್ತ ಆಹಾರವನ್ನು ಕೂಡ ನೀಡುವುದಿಲ್ಲ. ಎಷ್ಟೋ ಜನ ವೃದ್ಧರು ದೈಹಿಕ ಹಾಗೂ ಮಾನಸಿಕ ತೊಳಲಾಟಗಳನ್ನು ಹೊಂದಿದ್ದರೂ ಕೂಡ ತಮ್ಮ ದೈಹಿಕ ದೌರ್ಬಲ್ಯ, ಅನಾರೋಗ್ಯಗಳನ್ನು ಬದಿಗಿಟ್ಟು ಹೊಟ್ಟೆಯ ಪಾಡಿಗೆ ದುಡಿಯುವ ಅನಿವಾರ್ಯ ಪರಿಸ್ಥಿತಿಗಳು ಇವೆ. ಅನಾರೋಗ್ಯ ಪೀಡಿತ ವೃದ್ಧರನ್ನು

ಮಕ್ಕಳು ಮನೆಯ ಕೋಣೆಯಲ್ಲಿ ಕೂಡಿ ಹಾಕುವುದು ಇಲ್ಲವೇ ಮನೆಯಿಂದ ಹೊರದೂಡುವ ಉದಾಹರಣೆಗಳು ಇವೆ.[2]

### ೫. ಮಾನಸಿಕ ಅಸ್ತವ್ಯಸ್ತ :

ಬಹುಬೇಗನೆ ವೃದ್ಧಾಪ್ಯಕ್ಕೆ ಬರುವ ಹಂತಗಳಲ್ಲಿ ಮಾನಸಿಕ ಅಸ್ತವ್ಯಸ್ತ ಒಂದು ಪ್ರಮುಖ ಕಾರಣವಾದ ಅಂಶವಾಗಿದೆ. ಅರವತ್ತನೇ ವಯಸ್ಸಿಗೆ ಸಮೀಪಿಸುತ್ತಿದ್ದಂತೆಯೇ ವ್ಯಕ್ತಿಗಳು ಇನ್ನು ಮುಂದೆ ನಮ್ಮ ಜೀವನದ ಗತಿ ಹೇಗೆ ಎಂದು ಮತ್ತು ನಮ್ಮನ್ನು ಯಾರು ಆರೈಕೆ ಮಾಡುತ್ತಾರೆ. ಆಶ್ರಯ ನೀಡುತ್ತಾರೆಂಬ ಮುಂತಾದ ಚಿಂತೆಗಳನ್ನು ಮಾಡಿ ವ್ಯಕ್ತಿಗಳು ಮಾನಸಿಕ ಅಸ್ತವ್ಯಸ್ತಕ್ಕೆ ಗುರಿಯಾಗುತ್ತಾರೆ.

ವೃದ್ಧಾಪ್ಯ ಸಾಮಾಜಿಕವಾಗಿಯೂ ವ್ಯಕ್ತಿಗೆ ಸಮಸ್ಯೆ ತಂದಿದೆ. ಹಿಂದಿನ ಕಾಲಕ್ಕೆ ಸಾಮಾಜಿಕ ಹಾಗೂ ಆರ್ಥಿಕ ಸಂಬಂಧಗಳು ಸಂಪ್ರದಾಯಿಕವಾಗಿದ್ದಾಗ ಜೀವನ ಮಾಡಲು ವೃದ್ಧರಿಗೆ ತೊಂದರೆ ಇರಲಿಲ್ಲ. ಕುಟುಂಬ, ಕಳ್ಳುಬಳ್ಳಿ, ಜಾತಿ, ವೃತ್ತಿ, ಗುಂಪು, ಧರ್ಮ, ನೆರೆಹೊರೆ ಮುಂತಾದ ಸಂಬಂಧಗಳು ಭದ್ರವಾಗಿದ್ದಾಗ, ವೃದ್ಧರ ಜೀವನ ಕಷ್ಟಕರವಾಗಿರಲಿಲ್ಲ. ಸಂಯುಕ್ತ ಕುಟುಂಬದಲ್ಲಿ ಎಲ್ಲರಿಗೂ ಅನ್ನ, ವಸತಿ, ವಸ್ತ್ರ, ರಕ್ಷಣೆ ಹಾಗೂ ಧಾರ್ಮಿಕ ವಿಧಿಗಳ ನೆರವು ಇದ್ದವು. ಯಾರಲ್ಲೂ ತಾನು ಒಂಟಿ, ಅನಾಥ, ಅವಲಂಬಿ ಎನ್ನುವ ಭಾವನೆ ಇರುತ್ತಿರಲಿಲ್ಲ. ಇಂದು ಅವಿಭಕ್ತ ಕುಟುಂಬಗಳು ಒಡೆದು ಹೋಗಿವೆ. ಜೊತೆಗೆ ರಾಜಕೀಯ ಹಾಗೂ ಆರ್ಥಿಕ ಸ್ಪರ್ಧೆಯಿಂದಾಗಿ ನೆರೆಹೊರೆ, ಕಳ್ಳುಬಳ್ಳಿ ಹಾಗೂ ಜಾತಿ ಸಂಬಂಧಗಳು ಕ್ಷೀಣವಾಗಿವೆ.

ಅಲ್ಲದೆ ಸಂಪ್ರದಾಯಿಕವಾಗಿ ಬಂದ ವೃತ್ತಿಗಳಾದ ವ್ಯವಸಾಯ, ಪಶುಪಾಲನೆ, ನೂಲುವುದು, ನೇಯುವುದು, ಮುಂತಾದವು ಕುಟುಂಬದ ಎಲ್ಲಾ ಸದಸ್ಯರಿಗೂ ಅವರವರ ವಯಸ್ಸಿಗೆ, ಶಕ್ತಿಗೆ, ಪರಿಣತಿಗೆ, ಲಿಂಗಭೇದಕ್ಕೆ ತಕ್ಕಂತೆ ಕೆಲಸ ಒದಗಿಸುತ್ತಿದ್ದವು. ಆದ್ದರಿಂದ ಅಂಥ ಕುಟುಂಬದಲ್ಲಿಯೂ ವೃದ್ಧರಲ್ಲಿ ನಾವು ಅನುಪಯುಕ್ತರು, ಅಪ್ರಯೋಜಕರು, ಪರಾವಲಂಬಿಗಳು ಎನ್ನುವ ಭಾವನೆ ಬರುತ್ತಿರಲಿಲ್ಲ. ಇತ್ತೀಚಿನ ಸಮಾಜದಲ್ಲಿ ಬಂದ ಬದಲಾವಣೆಗಳಿಂದಾಗಿ ಸಂಯುಕ್ತ ಕುಟುಂಬಗಳು ಒಡೆದು ಹೋಗಿವೆ. ಇದಕ್ಕೆ ಆಧುನಿಕ ಶಿಕ್ಷಣ ಕುಟುಂಬದ ವೃತ್ತಿ ಬಿಟ್ಟು ಹೊರಗೆ ನೌಕರಿ ಮಾಡುವುದು, ನಗರಕ್ಕೆ ವಲಸೆ

ಹೋಗುವುದು ಕಾರಣವಾಗಿದ್ದು ಇದರಿಂದಾಗಿ ವೃದ್ಧರಿಗೆ ಅನೇಕ ಬಗೆಯ ಸಮಸ್ಯೆಗಳು ಬಂದಿವೆ. ಅಂತಹ ಸಮಸ್ಯೆಗಳಲ್ಲಿ ತೊಂದರೆಗಳಲ್ಲಿ ಮಾನಸಿಕ ಅಸ್ತಸ್ಯಸ್ತ ಒಂದು ಪ್ರಮುಖ ಸಮಸ್ಯೆಯಾಗಿದೆ.

**೬. ಉದ್ಯೋಗದ ಸಮಸ್ಯೆ :**

ವೃದ್ಧಾಪ್ಯಕ್ಕೆ ಹತ್ತಿರವಾಗುವ ವ್ಯಕ್ತಿಗಳಿಗೆ ಉದ್ಯೋಗದ ಸಮಸ್ಯೆಯು ಒಂದು ತಲೆನೋವಾಗಿದೆ. ಅವರ ವಯಸ್ಸಿಗೆ ಅನುಗುಣವಾದ ವೃತ್ತಿಗಳನ್ನು ಒದಗಿಸಿಕೊಡಲು ಕಷ್ಟವಾಗಿ ಅವರ ಉದ್ಯೋಗಕ್ಕೆ ಒಂದು ದೊಡ್ಡ ಸಮಸ್ಯೆಯಾಗಿದೆ. ವೃದ್ಧರಿಗೆ ಯಾವ ಕೆಲಸ ಕೊಟ್ಟರೂ ಮಾಡುವ ಸಾಮ್ರರ್ಥ್ಯವಿರುವುದಿಲ್ಲ. ಕೆಲವರಿಗೆ ದೂರ ದೃಷ್ಟಿಯಾದರೆ ಮತ್ತೆ ಕೆಲವರಿಗೆ ಸಮೀಪ ದೃಷ್ಟಿ ಇನ್ನೂ ಕೆಲವರಿಗೆ ಕಣ್ಣೇ ಕಾಣಿಸುವುದಿಲ್ಲ. ದೈಹಿಕಶಕ್ತಿ ಕುಗ್ಗುವಿಕೆ, ನರಗಳ ದೌರ್ಬಲ್ಯ, ರಕ್ತ ಒತ್ತಡ, ಆಗಾಗ್ಗೆ ಆರೋಗ್ಯ ಕೆಡುವುದು ಇವೇ ಮುಂತಾದ ವೃದ್ಧಾಪ್ಯದಲ್ಲಿ ಕಾಡುವ ಸಮಸ್ಯೆಗಳಾಗಿವೆ. ಇಂತಹ ಕಾರಣಗಳಿಂದಾಗಿ ಅವರವರ ವಯಸ್ಸಿಗೆ, ಅರ್ಹತೆಗೆ , ಸಾಮರ್ಥ್ಯಕ್ಕೆ ಅನುಗುಣವಾದ ಉದ್ಯೋಗ ಒದಗಿಸುವುದು ತುಂಬಾ ಕಠಿಣವಾದ ಕೆಲಸವಾಗಿದೆ.

ಸಮಾಜದಲ್ಲಿ ಪ್ರತಿಯೊಬ್ಬರೂ ತಾರುಣ್ಯ ವಯಸ್ಸಿನಲ್ಲಿ ಒಂದಲ್ಲಾ ಒಂದು ರೀತಿಯ ವೃತ್ತಿಯನ್ನು ಅಥವಾ ಉದ್ಯೋಗದಲ್ಲಿ ನಿರತನಾಗಿರುತ್ತಾನೆ. ಆದರೆ ಮುಪ್ಪಿನ ವಯಸ್ಸಿನಲ್ಲಿ ಉದ್ಯೋಗದ ನಿಯಮಗಳನುಸಾರ ಇಲ್ಲವೇ ದೌರ್ಬಲ್ಯಗಳ ಕಾರಣದಿಂದಾಗಿ ಕೆಲಸದಿಂದ ನಿವೃತ್ತಿಯಾಗುತ್ತಾನೆ. ಅನೇಕ ಜನರು ಸರಕಾರಿ ಉದ್ಯೋಗದಲ್ಲಿ ತೊಡಗಿದ ವ್ಯಕ್ತಿಗಳು ನಿವೃತ್ತಿ ಹೊಂದಿದ ನಂತರ ಎದುರಿಸುವ ಸಮಸ್ಯೆಗಳು ಸಂಕೀರ್ಣವಾಗಿರುತ್ತವೆ. ನಿವೃತ್ತಿ ನಂತರ ತಮ್ಮ ಜೀವನವೇ ಮುಗಿಯಿತು ಎಂದು ಭಾವಿಸಿಕೊಳ್ಳುತ್ತಾರೆ. ಇಂದಿನ ಸಮಾಜದಲ್ಲಿ ನಿರುತ್ಪಾದಕ ವಸ್ತುಗಳಂತೆ ಇಲ್ಲವೇ ಕೆಟ್ಟು ಗ್ಯಾರೇಜು ಸೇರಿದ ಹಳೆಯ ಕಾರಿನಂತೆ ಎಂದು ಪರಿಗಣಿಸುತ್ತಾರೆ ತಮ್ಮ ಜೀವನದಲ್ಲಿ ಮೌಲ್ಯಗಳು ಕಡಿಮೆಯಾಗಿವೆ ಎಂಬ ಭಾವನೆಗಳನ್ನು ಹೊಂದಿರುತ್ತಾರೆ. ಉದ್ಯೋಗವು ವೃದ್ಧಿರಿಗೆ ಒಂದು ವರಶಾಪವಾಗಿದೆ.

## ೭. ಏಕಾಂಗಿತನ :

ವೃದ್ಧಾವಸ್ಥೆಯ ಅತ್ಯಂತ ದುರಂತದ ಸ್ಥಿತಿಯೆಂದರೆ ಏಕಾಂಗಿತನ. ಇಂದಿನ ಆಧುನಿಕ ಸಮಾಜದಲ್ಲಿ ವೃದ್ಧರ ಅಸಂಖ್ಯಾತ ಉದಾಹರಣೆಗಳು ದೊರಕುತ್ತವೆ. ತಮ್ಮ ಆತ್ಮೀಯ ಒಡನಾಡಿಗಳನ್ನು ಬಂಧು ಬಾಂಧವರನ್ನು ಕಳೆದುಕೊಂಡು ಸಂಗಾತಿಗಳಿಲ್ಲದ ಏಕಾಂಗಿ ಜೀವನ ಕೆಲವರದಾದರೆ ತಮ್ಮ ಮಕ್ಕಳು ಹಾಗೂ ಇನ್ನಿತರ ಸಂಬಂಧಿಗಳೊಂದಿಗೆ ಬದುಕುತ್ತಿದ್ದರೂ ಕೂಡ ಏಕಾಂಗಿತನದ ನರಕ ಸದೃಶ ಬದುಕನ್ನು ನೆಡೆಸುವ ಜನ ಹಲವರಿದ್ದಾರೆ. ರೋಗಗ್ರಸ್ಥರಾಗಿರುವಾಗ ಅವರನ್ನು ಆಸ್ಪತ್ರೆಗೆ ಸೇರಿಸಿದರೂ ಕೂಡ ಅವರ ಸ್ಥಿತಿಗತಿಗಳನ್ನು ವಿಚಾರಿಸಿಕೊಳ್ಳಲು, ಆತ್ಮೀಯತೆಯನ್ನು ವ್ಯಕ್ತಪಡಿಸಲು, ಬೇರೆಯವರಿಗೆ ಇಷ್ಟವಿರುವುದಿಲ್ಲ. ವೃದ್ಧರಿಗೆ ತಮ್ಮಲ್ಲಿ ಹುದುಗಿದ ದುಃಖದ ಅಳಲುಗಳನ್ನು ಬೇರೆಯವರೊಂದಿಗೆ ತೋಡಿಕೊಳ್ಳಲೂ ಸಾಧ್ಯವಾಗದಂತಹ ಪರಿಸ್ಥಿತಿ ಇರುತ್ತದೆ.

ಇಂದಿನ ವೇಗದ ಬದುಕಿನಲ್ಲಿ ಅವರನ್ನು ಗಮನಿಸಲು ಸುಖ ದುಃಖಗಳನ್ನು ವಿಚಾರಿಸಲು ಸಮಯವೇ ಸಿಗುತ್ತಿಲ್ಲ. ತಮ್ಮ ಸ್ವಂತ ಮಕ್ಕಳನ್ನೇ ಗಮನಿಸಿ ಕೊಳ್ಳಲು ಸಾಧ್ಯವಿಲ್ಲದ ಸ್ಥಿತಿಯಲ್ಲಿ ಉದ್ಯೋಗದಲ್ಲಿರುವ ದಂಪತಿಗಳು ವೃದ್ಧರ ಹತ್ತಿರ ಸುಳಿಯುವುದೇ ಇಲ್ಲ. ಅನಿವಾರ್ಯ ಸ್ಥಿತಿಯಲ್ಲಿ ವೃದ್ಧಾಶ್ರಮಗಳನ್ನು ಸೇರಿದ ವೃದ್ಧ ತಂದೆ ತಾಯಿಗಳನ್ನು ಭೇಟಿಯಾಗುವ ಸೌಜನ್ಯವನ್ನು ಕೂಡ ಮಕ್ಕಳು ತೋರಿಸುವುದಿಲ್ಲ. ನಗರ ಬಡಾವಣೆ ಪ್ರದೇಶಗಳಲ್ಲಿ ಹಾಗೂ ಪ್ರತಿಷ್ಠಿತ ವಸತಿ ಪ್ರದೇಶಗಳಲ್ಲಿ ಕಾಲಹರಣ ಮಾಡಲು, ಪರಸ್ಪರ ಮಾತನಾಡಿ ಒಂಟಿತನವನ್ನು ನೀಗಲು ಅವಕಾಶವೀಯದಂತೆ ಬಾಗಿಲುಗಳನ್ನು ಮುಚ್ಚಿಕೊಂಡಿರುವುದು ಕಂಡುಬರುತ್ತದೆ. ಇನ್ನು ವಿದೇಶಗಳಲ್ಲಿರುವ ತಮ್ಮ ಮಕ್ಕಳೊಂದಿಗೆ ವಾಸವಾಗಿರುವ ವೃದ್ಧರ ಏಕಾಂಗಿತನಕ್ಕೆ ಪಾರವೇ ಇಲ್ಲ. 'ಪಾಶ್ಚಾತ್ಯ ದೇಶಗಳಲ್ಲಿರುವ ಉದ್ಯೋಗಿಗಳು ಬಿರುಗಾಳಿ ವೇಗದ ಬದುಕನ್ನು ನೆಡೆಸುತ್ತಿದ್ದಾರೆ. ಇಲ್ಲಿ ಪುತ್ರ ಇಲ್ಲವೇ ಪುತ್ರಿಯ ಪ್ರೀತಿಯ ಮಂಕು ಕವಿದು ದೀರ್ಘ ದಿನಗಳಿಗೆ ಬೆಳಕನ್ನು ನೀಡಲು ಸಾಧ್ಯವಿಲ್ಲ. ಇಲ್ಲಿ ವೃದ್ಧರಿಗೆ ಪತ್ರಿಕೆಗಳು ಹಾಗೂ ದೂರದರ್ಶನಗಳೇ ಸಂಗಾತಿಗಳು. ಒಂಟಿತನದ ಬೇಸರವನ್ನು ಕಳೆಯಲು

ರಸ್ತೆಯಡೆಗೆ ನೋಡಿದರೆ ಒಂದು ಪ್ರಾಣಿಯ ಸುಳಿವನ್ನು ಕಾಣುವುದು ಅಸಾಧ್ಯ' ಎಂಬುದು ವಿಜಯ ರಾಘವನ್ ಎಂಬುವರ ಹೇಳಿಕೆಯಾಗಿದೆ. ಮಕ್ಕಳಿಲ್ಲದ ವೃದ್ದ ದಂಪತಿಗಳಿಗಂತೂ ಏಕಾಂಗಿತನದ ಬದುಕು ಜೀವನದಲ್ಲಿ ಶೂನ್ಯ ಸ್ಥಿತಿಯನ್ನು ನಿರ್ಮಿಸಿದೆ.

## ೪.೨ – ವಯೋವೃದ್ಧರ ಸಮಸ್ಯೆಗಳಿಗೆ ಪರಿಹಾರೋಪಾಯಗಳು :

ವಯೋವೃದ್ಧರ ಸಮಸ್ಯೆಗಳ ಪರಿಹಾರೋಪಾಯವನ್ನು ಕೇವಲ ಕೆಲವರು ಮಾಡುವಂತ ಕೆಲಸವಲ್ಲ. ವೃದ್ದರೂ ಸೇರಿ ಅವರ ಕುಟುಂಬ, ಸ್ವಯಂ ಸೇವಾಸಂಸ್ಥೆಗಳು, ಸರಕಾರ ಹೀಗೆ ದೇಶದ ಪ್ರತಿಯೊಬ್ಬನೂ ಕೂಡಿ ಮಾಡಬೇಕು. ಕುಟುಂಬ ತಮ್ಮಲ್ಲಿರುವ ವೃದ್ದರಿಗೆ ಅನುಕೂಲ ಮಾಡಿಕೊಡಲು ಹೆಚ್ಚು ಸಮಂಜಸವಾಗಿದೆ.

ಮೊದಲನೆಯದಾಗಿ ಅವರು ತಮ್ಮ ತಾರುಣ್ಯದ ದಿನಗಳಲ್ಲಿ ಕುಟುಂಬದ ಸರ್ವಾಂಗೀಯ ಅಭಿವೃದ್ಧಿಗಾಗಿ ದುಡಿದವರು ತಮ್ಮನ್ನು ಸಾಕಿ ಸಲುಹಿದವರು ಎಂದು ಗೌರವಿಸಬೇಕು. ಅವರ ಇಚ್ಛೆ, ಆರೋಗ್ಯ ಹಾಗೂ ಮನೋಭಾವೆಗೆ ತಕ್ಕಂತಹ ಆಹಾರ ನೀಡಬೇಕು. ವೃದ್ದರಿಗೆ ನಿದ್ದೆ ಕಡಿಮೆ ಲಘುವಾದದ್ದು ಕಾರಣ ಅವರಿಗೆ ಇರಲು ನಿದ್ರಿಸಲು ಮನೆಯಲ್ಲಿ ಅವರಿಗೆ ಸೂಕ್ತ ಸ್ಥಳಾವಕಾಶ ಮಾಡಿಕೊಡಬೇಕು. ಅನೇಕ ಕುಟುಂಬಗಳಲ್ಲಿ ವೃದ್ದರನ್ನು ಚಿಕ್ಕ ಮಕ್ಕಳು ಅಥವಾ ನಾಯಿ, ಎತ್ತು, ಎಮ್ಮೆ ಮುಂತಾದ ಸಾಕು ಪ್ರಾಣಿಗಳು ಇರುವ ಕೊಠಡಿಯಲ್ಲಿ ವರಾಂಡದಲ್ಲಿ ಮಲಗಲು ವ್ಯವಸ್ಥೆ ಮಾಡುತ್ತಾರೆ. ವೃದ್ದರಿಗೆ ಸೂಕ್ತಗಾಳಿ, ಬೆಳಕಿನ ಜೊತೆಗೆ ಧೂಳು ಗದ್ದಲ ಇಲ್ಲದ ಜಾಗವನ್ನು ನೀಡಬೇಕು. ಇತರರಿಗೆ ಸ್ಥಳಾವಕಾಶ ಮಾಡಿ ಕೊಡಲು ಮಲಗಿದ ಅಥವಾ ಕುಳಿತ ಅವರನ್ನು ಪದೇ ಪದೇ ಎದ್ದು ಕೂಡುವಂತಹ ವ್ಯವಸ್ಥೆ ಮಾಡಬೇಕು.

ವೃದ್ದಾಪ್ಯ ಒಂದು ಸಮಸ್ಯೆಯಾಗಿರುವುದು ನಿಜವಾದರೂ ಇದು ಎಲ್ಲ ಸಮಾಜಗಳಲ್ಲಿಯೂ ಎಲ್ಲಾ ಕಾಲಕ್ಕೂ ಒಂದೇ ರೀತಿಯ ಸಾಮಾಜಿಕ ಸಮಸ್ಯೆಯಾಗಿಲ್ಲ. ಭಾರತೀಯ ಸಮಾಜದಲ್ಲಿ ಇಂದಿನವರೆಗೂ ಗ್ರಾಮೀಣ ಬದುಕು ಅವಿಭಕ್ತ ಕುಟುಂಬಗಳೇ ಅಧಿಕ ಪ್ರಮಾಣದಲ್ಲಿರಲಾಗಿ ವೃದ್ದರ ಇರುವಿಕೆ ತುಂಬಾ ಪ್ರಯೋಜನಕಾರಿಯಾಗಿಯೇ ಇರುವುದು. ಶಿಶುಗಳ ಪಾಲನೆ, ಪೋಷಣೆಗೆ ಕಿರಿಯರ ಸಾಮಾಜಿಕರಣಕ್ಕೆ ಬೇಸಾಯ

ಮೊದಲಾದ ಉದ್ಯೋಗಗಳಲ್ಲಿ ಕೈಲಾದ ನೆರವು ನೀಡಲು ವೃದ್ಧರ ಇರುವಿಕೆಗೆ ಅರ್ಥ ಬರುವಂತೆ ಅವರ ಬದುಕು ನೆಮ್ಮದಿಯುತವಾಗಿರುವಂತೆ ನೋಡಿಕೊಳ್ಳ ಬೇಕಾದುದು ಪ್ರತಿಯೊಬ್ಬ ವ್ಯಕ್ತಿಯ, ಸಂಘಸಂಸ್ಥೆಗಳ, ಸಮಾಜದ ಆದ್ಯ ಕರ್ತವ್ಯವಾಗಿರುವುದು.

**ಪರಿಹಾರೋಪಾಯಗಳು ಮತ್ತು ರಕ್ಷಣೆಗಳು :**

೧. ವೃದ್ಧಾಶ್ರಮಗಳ ಸ್ಥಾಪನೆ.

೨. ಏಕಾಂಗಿತನದಿಂದ ಮುಕ್ತಿ.

೩. ಸಾಮಾಜಿಕ ಭದ್ರತೆಯನ್ನು ಒದಗಿಸುವುದು.

೪. ಸಂಧ್ಯಾ ಸುರಕ್ಷೆ ಯೋಜನೆ ಬಲಗೊಳಿಸುವುದು.

೫. ವೃದ್ಧಾಪ್ಯ ವೇತನ ಹೆಚ್ಚಳ.

೬. ಆರೋಗ್ಯದ ಸಂರಕ್ಷಣೆ.

೭. ಅಲೆಮಾರಿತನದಿಂದ ಮುಕ್ತಿ.

೮. ಗೌರವ ಮನೋಭಾವನೆ ತೋರುವುದು.

೯. ಸರಕಾರ, ಸಂಘ–ಸಂಸ್ಥೆಗಳಿಂದ ನೆರವು.

೧೦. ಸ್ವಯಂ ಉದ್ಯೋಗಕ್ಕೆ ತರಬೇತಿ ನೀಡುವುದು.

೧೧. ಕುಟುಂಬದಲ್ಲಿ ವೃದ್ಧರ ಆರೈಕೆ.

೧೨. ಕರ್ನಾಟಕದಲ್ಲಿ ವೃದ್ಧರ ರಕ್ಷಣೆ.

೧೩.ವೃದ್ಧಾಪ್ಯದ ಬಗೆಗೆ ಸತ್ಯಸಂಗತಿಗಳು.

೧೪.ವೃದ್ಧರಿಗೆ ಕೆಲವೊಂದು ಸಲಹೆಗಳು.

ಈ ಮೇಲಿನ ಪರಿಹಾರೋಪಾಯಗಳನ್ನು ಮತ್ತು ರಕ್ಷಣೆಗಳನ್ನು ಈ ಕೆಳಗಿನಂತೆ ವಿವರಿಸಬಹುದು.

೧. ವೃದ್ಧಾಶ್ರಮಗಳ ಸ್ಥಾಪನೆ :

ಅಭಿವೃದ್ಧಿ ಹೊಂದುತ್ತಿರುವ ನಮ್ಮ ರಾಷ್ಟ್ರದಲ್ಲಿ ಇತ್ತೀಚಿನ ದಿನಗಳಲ್ಲಿ ವೃದ್ದರು ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. ಕೆಲವೊಂದು ಅವಿಭಕ್ತ ಕುಟುಂಬಗಳು ವಿಘಟನೆಯಿಂದಾಗಿ ವೃದ್ದರು ಬೀದಿ ಪಾಲಾಗಿ ತಮ್ಮ ಜೀವನ ನಿರ್ವಹಣೆಗೆ ಭಿಕ್ಷೆ ಬೇಡುವುದು ಒಂದು ಪ್ರವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಸಮಾಜದಲ್ಲಿ ಯಾವ ವೃದ್ದರು ಆಶ್ರಯ ರಹಿತ ಜೀವನ ಸಾಗಿಸುತ್ತಿದ್ದಾರೋ, ಯಾರು ಅಲೆಮಾರಿ ಜೀವನವನ್ನು ನೆಡೆಸುತ್ತಿದ್ದಾರೋ, ಯಾವ ವೃದ್ದರಿಗೆ ಸಮಾಜದಲ್ಲಿ ಅಗೌರವ ಸ್ಥಾನಮಾನವನ್ನು ಹೊಂದಿರುತ್ತಾರೋ, ಅಂತಹವರನ್ನು ಗುರುತಿಸಿ ಅವರನ್ನು ವೃದ್ದಾಶ್ರಮಗಳಲ್ಲಿ ಸೇರ್ಪಡಿಸುವುದು ಸರಕಾರದ ಮತ್ತು ಪ್ರತಿಯೊಬ್ಬ ಪ್ರಜೆಯ ಕರ್ತವ್ಯವಾಗಿದೆ.

ಇದಕ್ಕಾಗಿ ಸರಕಾರ ಮತ್ತು ಸಂಘ-ಸಂಸ್ಥೆಗಳು ಹೆಚ್ಚಿನ ಪ್ರಮಾಣದಲ್ಲಿ ವೃದ್ದಾಶ್ರಮಗಳ ಸ್ಥಾಪನೆಗೆ ಒತ್ತು ನೀಡಿ ಅದಕ್ಕೆ ಅನುದಾನ ಬಿಡುಗಡೆಗೆ ಮುಂದಾಗ ಬೇಕಾಗಿರುವುದು ಅವಶ್ಯಕವಾಗಿದೆ. ಪ್ರಸ್ತುತ ಭಾರತೀಯ ಸಮಾಜದಲ್ಲಿ ವೃದ್ದಾಶ್ರಮಗಳು ಅಸ್ತಿತ್ವದಲ್ಲಿ ಕಂಡುಬರುತ್ತಿದ್ದರೂ ಈಗಾಗಲೇ ಆಶ್ರಯ ರಹಿತರ ವೃದ್ದರಿಗೆ ಆಶ್ರಯ ತಾಣವಾಗಿ ಕಾರ್ಯ ನಿರ್ವಹಿಸುತ್ತಿರುವುದು ಗಮನಾರ್ಹವಾಗಿದೆ. ಮತ್ತು ಇಂತಹ ವೃದ್ದಾಶ್ರಮಗಳಲ್ಲಿ ವೃದ್ದರನ್ನು ಉತ್ತಮವಾಗಿ ನೋಡಿ ಕೊಂಡು ಅವರಿಗೆ ಮಾನಸಿಕವಾಗಿ ಬೆಂದ ಜೀವಗಳಿಗೆ ನೆಮ್ಮದಿಯ ದಿನಗಳನ್ನು ನೋಡುವಂತಾಗಬೇಕು.

೨. ಏಕಾಂಗಿತನದಿಂದ ಮುಕ್ತಿ :

ಆಧುನಿಕ ಸಮಾಜದಲ್ಲಿ ವೃದ್ದರಿಗೆ ಯಾವುದೇ ರೀತಿಯ ಗೌರವ ಮನೋಭಾವನೆ ತೋರುವಂತೆ ವ್ಯಕ್ತಿಗಳು ಕಾಣಿಸಿಕೊಳ್ಳುವುದು ತುಂಬಾ ವಿರಳ. ವೃದ್ದರ ಬಗ್ಗೆ ಅಗೌರವ

ತೋರುವ ವ್ಯಕ್ತಿಗಳೇ ಹೆಚ್ಚಾಗಿರುತ್ತಾರೆ. ಇಂತಹ ಸಂದರ್ಭದಲ್ಲಿ ವೃದ್ಧರಿಗೆ ಏಕಾಂಗಿತನವು ಒಂದು ಶಾಪವಾಗಿರುವಂತೆ ಕಾಣುತ್ತದೆ. ವೃದ್ಧರನ್ನು ಗೌರವಿಸುವುದರ ಜೊತೆಗೆ ಅವರಿಗೆ ಒಂದು ವ್ಯಕ್ತಿತ್ವ ಇದೆ ಎಂದು ಸಮಾಜದಲ್ಲಿ ಎಲ್ಲರೂ ತಿಳಿಯಬೇಕು. ಒಬ್ಬ ವ್ಯಕ್ತಿ ಅಧಿಕಾರದಲ್ಲಿದ್ದಾಗ ಅವರನ್ನು ಎಲ್ಲಾ ಸಭೆ ಸಮಾರಂಭಗಳಿಗೆ ಆಹ್ವಾನಿಸುವುದು ಘನತೆಯ ಕುರುಹಾಗುತ್ತದೆ. ಆದರೆ ಅದೇ ವ್ಯಕ್ತಿ ನಿವೃತ್ತನಾದರೆ, ವೃದ್ಧನಾದರೆ ಯಾರೂ ಅವರನ್ನು ಆಹ್ವಾನಿಸುವುದಿಲ್ಲ. ಇಂತಹ ಘಟನೆಗಳು ಜರುಗುವುದರಿಂದ ವೃದ್ಧರು ಏಕಾಂಗಿತನಕ್ಕೆ ಸಿಲುಕುತ್ತಾರೆ. ಏಕಾಂಗಿತನದಿಂದ ಇರುವಂತಹ ವೃದ್ಧರು ಗುರುತಿಸಿ ಮತ್ತು ಕುಟುಂಬದ ಸದಸ್ಯರ ಪ್ರೀತಿ ವಾತ್ಸಲ್ಯದಿಂದ ವಂಚಿತರಾದವರನ್ನು ಗುರುತಿಸಿ ವೃದ್ಧರಿಗೆ ಸಭೆ ಸಮಾರಂಭಗಳಿಗೆ ಆಹ್ವಾನಿಸುವುದು, ಸ್ನೇಹಿತರೊಡನೆ ಬೆರೆಯುವಂತೆ ಮಾಡುವುದು, ಕಷ್ಟ ದುಃಖಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವಂತೆ ಮಾಡುವುದು, ಎಲ್ಲರೂ ಎಲ್ಲರೊಡನೆ ಬೆರೆಯುವಂತೆ ಮಾಡುವುದು, ಸಹಕಾರ ನೀಡುವುದು ಮುಂತಾದವುಗಳನ್ನು ಮಾಡುವುದರಿಂದ ವೃದ್ಧರಲ್ಲಿ ಸಂಪೂರ್ಣವಾಗಿ ಮರೆಮಾಚುವಂತೆ ಅಥವಾ ನಾಶಮಾಡಬಹುದು.

**೩. ಸಾಮಾಜಿಕ ಭದ್ರತೆ ಒದಗಿಸುವುದು :**

ಆಧುನಿಕ ಸಮಾಜದಲ್ಲಿ ವಯೋವೃದ್ಧರಿಗೆ ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಯಾವುದೇ ಸೂಕ್ತ ರಕ್ಷಣೆ ಕಂಡುಬರುತ್ತಿಲ್ಲ. ಕ್ಷಣ ಕ್ಷಣಕ್ಕೆ ಬದಲಾಗುತ್ತಿರುವ ನಗರೀಕರಣ, ಕೈಗಾರೀಕರಣದಿಂದಾಗಿ ವ್ಯಕ್ತಿಗಳು ವೈಯಕ್ತಿಕ ಆಸೆ ಆಕಾಂಕ್ಷೆಗಳನ್ನು ಈಡೇರಿಸಿ ಕೊಳ್ಳುವುದಕ್ಕೋಸ್ಕರ ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಕ್ಕೆ ವಲಸೆ ಬರುತ್ತಿರುವುದು ಒಂದು ನಿರಂತರ ಪ್ರಕ್ರಿಯೆಯಾಗಿದೆ. ಇಂತಹ ಘಟನೆಗಳು ನೆಡೆಯುವುದರಿಂದ ಅವಿಭಕ್ತ ಕುಟುಂಬಗಳು ಶಿಥಿಲಗೊಂಡು ವಿಭಕ್ತ ಕುಟುಂಬಗಳಾಗಿ ಮಾರ್ಪಾಡುಗಳಾಗಿವೆ. ವೃದ್ಧರಿಗೆ ಯಾವುದೇ ರೀತಿಯ ರಕ್ಷಣೆ ಸಿಗುತ್ತಿಲ್ಲ. ಸಮಾಜದಲ್ಲಿ ಎಷ್ಟೋ ವೃದ್ಧರು ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ, ಗುಡಿಗಳಲ್ಲಿ, ಕೊಳಚೆ ಪ್ರದೇಶದಂತ ಸ್ಥಳಗಳಲ್ಲಿ ವಾಸಿಸುತ್ತಿರುವುದು ಸತ್ಯಸಂಗತಿಯ ವಿಷಯವಾಗಿದೆ. ಇಂತಹ ಒಂದು ಸ್ಥಳಗಳಲ್ಲಿ ವಾಸಿಸುವ ವೃದ್ಧರನ್ನು ಗುರುತಿಸಿ ಮತ್ತು ಸಮಾಜದಲ್ಲಿ ವೃದ್ಧರು ಪರಾವಲಂಬಿಗಳು, ಅಪ್ರಯೋಜಕರು ಎಂದು ತಿಳಿದು ಕೊಂಡಿರುವ ವೃದ್ಧರನ್ನು ಗುರುತಿಸಿ

ಸಾಮಾಜಿಕವಾಗಿ ಅವರಿಗೆ ಭದ್ರತೆ, ರಕ್ಷಣೆ ಒದಗಿಸುವುದು ಅಗತ್ಯವಾಗಿದೆ. ಮತ್ತು ಸಮಾಜದಲ್ಲಿ ವೃದ್ಧರಿಗೆ ಘನತೆ, ಗೌರವ, ಸ್ಥಾನಮಾನಗಳನ್ನು ಸಿಗುವಂತೆ ಮಾಡುವುದು ಸೂಕ್ತ.

**೪. ಸಂಧ್ಯಾ ಸುರಕ್ಷೆ ಯೋಜನೆಯನ್ನು ಒದಗಿಸುವುದು :**

ಸಮಾಜದಲ್ಲಿ ಪ್ರತಿಯೊಂದು ಸರಕಾರಿ ಇಲಾಖೆಯಲ್ಲಿ ಲಂಚತನ ಅವ್ಯವಹಾರಗಳಂತ ಘಟನೆಗಳು ಜರುಗತ್ತಲೇ ಇವೆ. ಇಂತಹ ಪ್ರಕರಣಗಳಿಗೆ ಕಡಿವಾಣ ಹಾಕಿ ಪ್ರಾಮಾಣಿಕತನದ ಸೇವೆ ಒದಗಿಸುವುದು ಅಗತ್ಯ. ಸಂಧ್ಯಾ ಸುರಕ್ಷ ಯೋಜನೆಯು ಕೇವಲ ವಿಧವೆಯರಿಗಾಗಿ ಸರಕಾರ ಜಾರಿಗೆ ತಂದಿರುವ ಒಂದು ಯೋಜನೆಯಾಗಿದೆ. ಪ್ರಸ್ತುತ ಸಮಾಜದಲ್ಲಿ ಈ ಯೋಜನೆ ಬಹಳಷ್ಟು ವಿಧವೆಯರಿಗೆ ಸಿಗುತ್ತಿಲ್ಲ. ಪ್ರತಿ ನಾಲ್ಕು ತಿಂಗಳಿಗೆ ಐದು ತಿಂಗಳಿಗೆ ಒಂದು ಸಾರಿ ಮಾತ್ರ ವಿತರಣೆ ಮಾಡುತ್ತಾರೆ. ವಿಧವಾ ಸ್ತ್ರೀಯರು ಮತ್ತು ವೃದ್ಧ ಸ್ತ್ರೀಯರು ಹಣಕ್ಕಾಗಿ ಅಲೆದು ಸುಸ್ತಾಗಿ ಮತ್ತಷ್ಟು ಮಾನಸಿಕ ಒತ್ತಡಕ್ಕೆ ಸಿಲುಕುತ್ತಿದ್ದಾರೆ. ಈ ಯೋಜನೆಯ ಹಣವನ್ನು ಎಷ್ಟೋ ಅಧಿಕಾರಿಗಳು ನುಂಗಿ ಹಾಕುತ್ತಿದ್ದಾರೆ. ವಿಧವೆಯರಿಗಾಗಿ ಪ್ರತ್ಯೇಕ ಹಣವನ್ನು ಪ್ರತಿ ತಿಂಗಳು ಬರುವಂತೆ ಮಾಡಬೇಕು. ಮತ್ತು ಸಂಧ್ಯಾ ಸುರಕ್ಷ ಯೋಜನೆಯನ್ನು ಬಲಪಡಿಸಿ ಹೆಚ್ಚಿನ ಅನುದಾನವನ್ನು ಬಿಡುಗಡೆ ಮಾಡಿ ವಿಧವಾ ಸ್ತ್ರೀಯರಿಗೆ ಸಿಗುವಂತಾಗಬೇಕು. ವೃದ್ಧ ಸ್ತ್ರೀಯರಿಗೆ ಆರ್ಥಿಕವಾಗಿ ರಕ್ಷಣೆ, ಸಾಮಾಜಿಕವಾಗಿ ರಕ್ಷಣೆ ಒದಗಿಸಿ ಅವರ ಮುಂದಿನ ದಿನಗಳ ಬದುಕು ಹಸಿರಾಗುವಂತೆ ಮಾಡುವುದು ಅಗತ್ಯ.

**೫. ವೃದ್ಧಾಪ್ಯ ವೇತನ ಹೆಚ್ಚಳ :**

ಗಗನಕ್ಕೇರಿರುವ ಪ್ರತಿಯೊಂದು ಅಗತ್ಯವಾದ ಜೀವನಾಂಶಗಳ ಬೆಲೆಗಳು ಇಂದು ಜನಸಾಮಾನ್ಯ ತಮ್ಮ ನಿತ್ಯ ಜೀವನದ ಮತ್ತು ತಮ್ಮ ಜೀವನವನ್ನು ಉಳಿಸಿಕೊಳ್ಳುವುದಕ್ಕಾಗಿ ಹರಸಾಹಸ ಮಾಡುತ್ತಿದ್ದಾನೆ. ಅಂತಹ ಒಂದು ಪರಿಸ್ಥಿತಿಯಲ್ಲಿ ವೃದ್ಧರ ಸ್ಥಿತಿಯು ಅಧೋಗತಿಯಾಗಿದೆ. ಈಗ ನೀಡುತ್ತಿರುವ ವೃದ್ಧಾಪ್ಯ ವೇತನ ಸರಿಯಾಗಿ ಸಿಗುತ್ತಿಲ್ಲ. ಸಿಕ್ಕರೂ

ಅದು ಯಾವುದೇ ರೀತಿಯ ಜೀವನ ನೆಡೆಸಲು ಬೇಕಾಗಿರುವ ಅಗತ್ಯ ವಸ್ತುಗಳನ್ನು ಕೊಂಡುಕೊಳ್ಳಲು ಸಾಕಾಗುತ್ತಿಲ್ಲ. ಇದರಿಂದ ತಮ್ಮ ವೃದ್ದಾಪ್ಯ ವೇತನ ಪಡೆಯುವುದಕ್ಕೆ ವೃದ್ದರು ಸಂಬಂಧಿಸಿದ ಕಛೇರಿಗಳಿಗೆ ತಿರುಗಿ ತಿರುಗಿ ಸುಸ್ತಾಗಿ ಮತ್ತಷ್ಟು ಶಾರೀರಿಕವಾಗಿ ಕುಗ್ಗುತ್ತಿದ್ದಾರೆ. ಇಂತಹ ಒಂದು ಪ್ರಸಂಗಗಳು ಕಂಡು ಬಂದರೂ ಯಾವ ಅಧಿಕಾರಿಗಳು, ಸಾರ್ವಜನಿಕರು ತಮ್ಮ ತಲೆ ಕೆಡಿಸಿಕೊಳ್ಳುವುದಿಲ್ಲ. ಆದ್ದರಿಂದ ವೃದ್ದಾಪ್ಯ ಜೀವನವನ್ನು ನೆಮ್ಮದಿಯ ಜೀವನವನ್ನಾಗಿ ಮಾಡಿ ಕೊಳ್ಳಬೇಕಾದರೆ ವೃದ್ದಾಪ್ಯ ವೇತನ ಅಗತ್ಯ ವಸ್ತುಗಳ ಬೆಲೆಗಳಿಗೆ ಅನುಗುಣವಾಗಿ ಹೆಚ್ಚಿಸಬೇಕು. ಮತ್ತು ಪ್ರತಿ ತಿಂಗಳು ವೃದ್ದರಿರುವ ಸ್ಥಳಗಳಿಗೆ ಮುಟ್ಟಬೇಕು ಮತ್ತು ವೃದ್ದರ ಸ್ಥಿತಿಗತಿ, ಸ್ಥಾನಮಾನಗಳನ್ನು ಹೆಚ್ಚಿಸಲು ಸರಕಾರ, ಸಂಘ-ಸಂಸ್ಥೆಗಳು ಇನ್ನಿತರ ಯೋಜನೆಗಳನ್ನು ತರುವುದು ಈಗಿರುವ ಯೋಜನೆಗಳನ್ನು ಬಲಪಡಿಸುವುದು ಸೂಕ್ತ ಕ್ರಮವಾಗಿದೆ. ವೃದ್ದರಿಗಾಗಿ ಮಾಡಿರುವ ಎಲ್ಲಾ ಯೋಜನೆಗಳ ಉಪಯೋಗಗಳು ವೃದ್ದರಿಗೆ ಸಮರ್ಪಕವಾಗಿ ವೃದ್ದರಿಗೆ ಮುಟ್ಟಿದರೆ ವೃದ್ದರ ಬದುಕು ಹಸನಾಗುವುದರಲ್ಲಿ ಸಂಶಯವಿಲ್ಲ.

**೬. ಆರೋಗ್ಯದ ಸಂರಕ್ಷಣೆ :**

ವೈದ್ಯಕೀಯ ಕ್ಷೇತ್ರ ನಿರಂತರವಾಗಿ ಹೊಸ ಹೊಸ ಸಂಶೋಧನೆಗಳಿಂದ ಪ್ರಗತಿ ಹೊಂದುತ್ತಿರುವ ನಮ್ಮ ರಾಷ್ಟ್ರದಲ್ಲಿ ಆರೋಗ್ಯದ ಸಂರಕ್ಷಣೆಯಲ್ಲಿ ಉತ್ತಮ ಸೇವೆಯನ್ನು ಒದಗಿಸುತ್ತಿರುವುದು ಗಮನಾರ್ಹವಾದ ವಿಷಯವಾಗಿದೆ. ಭಾರತದಂತಹ ರಾಷ್ಟ್ರದಲ್ಲಿ ವೃದ್ದಾಪ್ಯಕ್ಕೆ ಕಾಲಿಟ್ಟಿರುವ ಆರೋಗ್ಯದ ಚಿಂತನೆ ಮಾಡಬೇಕಾಗಿರುತ್ತದೆ. ವೃದ್ದಾಪ್ಯದಲ್ಲಿ ಒಂದು ಕಾಯಿಲೆ ಅಲ್ಲ ಹಲವಾರು ಕಾಯಿಲೆಯಿಂದ ಬಳಲುತ್ತಿದ್ದಾರೆ. ಒಂದು ರೋಗವನ್ನು ವಾಸಿ ಮಾಡುತ್ತಿದ್ದಂತೆಯೇ ಮತ್ತೊಂದು ಕಾಯಿಲೆಗೆ ಗುರಿಯಾಗುತ್ತಾರೆ. ಇಂದು ಹುಟ್ಟಿದ ಮಗುವಿನಿಂದ ಸಾಯುವ ಮುದುಕರಿಗೂ ಒಂದಲ್ಲಾ ಒಂದು ರೀತಿಯ ರೋಗಗಳ ಹುಟ್ಟುತ್ತಲೇ ಇವೆ. ವೈದ್ಯಕೀಯ ಕ್ಷೇತ್ರದಲ್ಲಿ ಹೊಸ ಹೊಸ ತಂತ್ರಜ್ಞಾನದ ಬಳಕೆಯಿಂದ ರೋಗಗಳನ್ನು ವಾಸಿಮಾಡಲು ಸರಕಾರ ವೈದ್ಯಕೀಯ ಇಲಾಖೆಗಳು ಹೊಸ ಹೊಸ

ಯೋಜನೆಗಳನ್ನು ಜಾರಿಗೆ ತಂದರೂ ವಿಚಿತ್ರ ರೋಗಗಳು ವಾಸಿ ಮಾಡಲಾರದಂತಹ ಕಾಯಿಲೆಗಳು ಹುಟ್ಟಿ ಕೊಂಡಿವೆ.

ತಾರುಣ್ಯ ವಯಸ್ಸಿನಲ್ಲಿ ಮಾಡಿದ ತಪ್ಪಿಗೆ ಮುಪ್ಪಿನಲ್ಲಿ ಶಿಕ್ಷೆ ಎನ್ನುವ ಹಾಗೆ ಮುಪ್ಪಿನಲ್ಲಿ ವೃದ್ಧರಿಗೆ ಬರುವ ಕಾಯಿಲೆಗೆ ಸಂಪೂರ್ಣ ಚಿಕಿತ್ಸೆ ದೊರೆಯಬೇಕು. ಉಚಿತ ಆರೋಗ್ಯ ಸೇವೆ ಸಿಗುವಂತಾಗಬೇಕು. ಪ್ರತ್ಯೇಕವಾಗಿ ವೃದ್ಧರಿಗಾಗಿ ಆಸ್ಪತ್ರೆಗಳನ್ನು ತೆರೆಯಬೇಕು. ಪ್ರತಿ ವಾರಕ್ಕೊಮ್ಮೆ ಉಚಿತ ನೇತ್ರ ಚಿಕಿತ್ಸ ಶಿಬಿರ ಕಾರ್ಯಕ್ರಮಗಳನ್ನು ನೆಡೆಸುವುದು ಅಂದಾಗಲೇ ವಯೋವೃದ್ಧರ ಆರೋಗ್ಯವನ್ನು ಕಾಪಾಡುವಲ್ಲಿ ಸಹಕಾರ ಸಹಾನುಭೂತಿ ವೃದ್ಧರಲ್ಲಿ ತೋರುವುದು ವೃದ್ಧರನ್ನು ಸಂತೃಸುವುದು ಆರೈಕೆ ಮಾಡಿ ವೃದ್ಧರ ಕಾಯಿಲೆಗಳನ್ನು ಗುಣಪಡಿಸಿ ಸಮಾಜದಲ್ಲಿ ಅವರು ಆರೋಗ್ಯವಂತರನ್ನಾಗಿ ಮಾಡುವುದು ಅಗತ್ಯವಾಗಿದೆ.

### ೭. ಅಲೆಮಾರಿತನದಿಂದ ಮುಕ್ತಿ :

ಭಾರತೀಯ ಸಾಂಸ್ಕೃತಿಕ ಮತ್ತು ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯಲ್ಲಿ ವೃದ್ಧರನ್ನು ಹಿರಿಯರು ಎನ್ನುವ ಗೌರವ ಮನೋಭಾವನೆ ಹೊಂದಿದ ಭಾರತದಲ್ಲಿ ಅವಿಭಕ್ತ ಕುಟುಂಬಗಳು ವಿಘಟನೆಯಿಂದ ಒಂದು ಪ್ರಸ್ತುತ ಸಮಾಜದಲ್ಲಿ ವೃದ್ಧರು ಬೀದಿ ಪಾಲಾಗಿ ಅಲೆಮಾರಿ ಜೀವನವನ್ನು ನೆಡೆಸುವಂತಾಗಿದೆ. ಅಲೆಮಾರಿ ಜೀವನ ನೆಡೆಸುವುದರಿಂದ ಸಮಾಜದಲ್ಲಿ ಅಗೌರವ ಸ್ಥಾನಕ್ಕೆ ಬರುತ್ತಾರೆ. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೊಂದುವುದರಿಂದ ವಾತಾವರಣದಲ್ಲಿ ಬದಲಾವಣೆಯಿಂದ ವೃದ್ಧರ ಆರೋಗ್ಯದಲ್ಲಿ ಬದಲಾವಣೆಯನ್ನುಂಟು ಮಾಡುತ್ತದೆ. ತಮ್ಮ ಜೀವನ ನಿರ್ವಹಣೆಗೆ ಯಾವುದೇ ಭದ್ರತೆ ಇಲ್ಲದಿರುವಿಕೆಯಿಂದ ವೃದ್ಧರು ಭಿಕ್ಷಾಟನೆ ಮಾಡುವುದು, ಸಣ್ಣ ಪುಟ್ಟ ಕಳ್ಳತನ ಮಾಡುವುದು, ಸುಳ್ಳು ಹೇಳುವುದು ಮುಂತಾದ ಕೃತ್ಯಗಳಲ್ಲಿ ಭಾಗಿಯಾಗಿರುತ್ತಾರೆ. ಹೆಚ್ಚಿನ ಪ್ರಮಾಣದಲ್ಲಿ ಭಿಕ್ಷೆ ಬೇಡಿಯೇ ತಮ್ಮ ಜೀವನ ನೆಡೆಸಿಕೊಂಡು ಹೋಗುತ್ತಿರುವ ದೃಶ್ಯ ಸರ್ವೆಸಾಮಾನ್ಯವಾಗಿದೆ. ಇಂತಹ ಅಲೆಮಾರಿ ಜೀವನವನ್ನು ನೆಡೆಸುವ ವೃದ್ಧರನ್ನು ಗುರುತಿಸಿ ಅವರನ್ನು ವೃದ್ಧಾಶ್ರಮಗಳಲ್ಲಿ ಬಿಡುವುದು ಅಥವಾ ಅವರ ಕುಟುಂಬದ ಸದಸ್ಯರುಗಳಿಗೆ ಒಪ್ಪಿಸುವುದು.

ಇನ್ನಿತರ ಕಾರ್ಯಗಳನ್ನು ಮಾಡಿದರೆ ವೃದ್ಧರನ್ನು ಸಂಪೂರ್ಣವಾಗಿ ಅಲೆಮಾರಿತನದಿಂದ ಮುಕ್ತಗೊಳಿಸಿ ಅವರು ಎಲ್ಲರಂತೆ ಸಮಾಜದಲ್ಲಿ ಮುಂದೆ ಬರುವ ದಿನಗಳಲ್ಲಿ ನೆಮ್ಮದಿಯ ಜೀವನ ನೆಡೆಸಲು ಸಹಕರಿಸುವುದು ಮಾನವೀಯತೆಯಾಗಿದೆ.

**೮. ಗೌರವ ಮನೋಭಾವನೆ ತೋರುವುದು :**

ಸಮಾಜದಲ್ಲಿ ಯಾವುದೇ ವ್ಯಕ್ತಿಗೆ ಗೌರವ ಇರುವುದಿಲ್ಲವೋ ಅವನು ಜೀವಂತ ಶವವಿದ್ದಂತೆ. ವ್ಯಕ್ತಿಯನ್ನು ಸಮಾಜದಲ್ಲಿ ಗುರುತಿಸುವುದು ಘನತೆ , ಗೌರವಗಳಿಂದ ಮಾತ್ರ. ಪ್ರಾಚೀನ ಸಮಾಜದಲ್ಲಿ ವೃದ್ಧರು ಎಂದರೆ ಹಿರಿಯರು, ಮಾರ್ಗದರ್ಶಕರು, ಗುರುಗಳು, ಎನ್ನುವ ಒಂದು ಪದ್ಧತಿಯಾಗಿತ್ತು. ಪ್ರಸ್ತುತ ಸಮಾಜವು ಬದಲಾವಣೆಯಿಂದ ಕುಟುಂಬದ ಸದಸ್ಯರು ತಮ್ಮ ಜೀವನ ನಿರ್ವಹಣೆಗೆ ಕೆಲಸಕಾರ್ಯಗಳಲ್ಲಿ ತೊಡಗಿರುತ್ತಾರೆ. ಆದರೆ ವಯಸ್ಸಾದ ತಂದೆ-ತಾಯಿಗಳನ್ನು ಜವ್ಬಾರಿಯಿಂದ, ಅಕ್ಕರೆಯಿಂದ, ಪ್ರೀತಿ-ವಾತ್ಸಲ್ಯದ ಮಾತುಗಳು ಆಡದೆ ಅವರನ್ನು ಒಂದು ಪ್ರತ್ಯೇಕ ಕೊಠಡಿಯಲ್ಲಿ ಇರಲು ಬಿಡುತ್ತಾರೆ. ಇದರಿಂದ ಅವರು ಏಕಾಂಗಿತನಕ್ಕೆ ಒಳಗಾಗುತ್ತಾರೆ. ಮಾನಸಿಕವಾಗಿ ಬೆಂದು ಹೋಗುತ್ತಾರೆ. ಇದರಿಂದ ವೃದ್ಧರು ಮನೆ ಬಿಟ್ಟು ಹೋಗುವುದು. ನಾವು ಆಶ್ರಯರಹಿತರು, ಅಪ್ರಯೋಜಕರು ಎನ್ನುವ ಭಾವನೆಗೆಒಳಗಾಗುತ್ತಾರೆ. ಇಂತಹ ಭಾವನೆಗೆ ತುತ್ತಾಗಿರುವ ವೃದ್ಧರನ್ನು ಗೌರವದಿಂದ ಕಾಣುವುದು, ಸಂತೈಸುವುದು, ಸಭೆ ಸಮಾರಂಭಗಳಿಗೆ ಆಹ್ವಾನಿಸುವುದು, ಸ್ನೇಹಿತರೊಡನೆ ಬೆರೆಯುವಂತೆ ಮಾಡುವುದರಿಂದ ಅವರಿಗೆ ಮಾನಸಿಕವಾಗಿ ಪ್ರಬಲರಾಗಿ ಸಮಾಜದಲ್ಲಿ ತಮಗೂ ಗೌರವವಿದೆ ಎನ್ನುವಂತೆ ಮಾಡಬೇಕು. ವೃದ್ಧರನ್ನು ಕಡೆಗಣಿಸದೇ ಅವರಿಗೆ ಗೌರವ ತೋರುವುದು ಪ್ರತಿಯೊಬ್ಬನ ಕರ್ತವ್ಯವಾಗಿದೆ.

**೯. ಸರಕಾರ ಮತ್ತು ಸಂಘ-ಸಂಸ್ಥೆಗಳಿಂದ ನೆರವು :**

ಪ್ರಸ್ತುತ ಸಮಾಜದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ಆಶ್ರಯ ವೃದ್ಧರಿಗೆ ಅವಶ್ಯಕತೆ ಇರುತ್ತದೆ. ಸಮಾಜದಲ್ಲಿ ಸ್ಥಾನಮಾನ, ಘನತೆ, ಗೌರವಗಳನ್ನು ವೃದ್ಧರಿಗೆ

ಸಿಗಬೇಕಾದರೆ ಅವರಿಗೆ ಆರ್ಥಿಕ ನೆರವು ಸರಕಾರ , ಸಂಘ-ಸಂಸ್ಥೆಗಳಿಂದ ಒದಗಿಸುವುದು ಮತ್ತು ವೃದ್ದರಿಗಾಗಿ ವಿಶೇಷ ಯೋಜನೆಗಳು ಮತ್ತು ಮೂಲಭೂತ ಸೌಲಭ್ಯಗಳನ್ನು ಕೊಡುವುದು ಅವಶ್ಯಕತೆ ಇರುತ್ತದೆ. ಸರಕಾರ ವೃದ್ದರ ಕಡೆಗೆ ಸ್ವಲ್ಪ ಕಣ್ಣಾಡಿಸಿ ಸಹಾನುಭೂತಿ ತೋರಿಸಿ ಸಹಕಾರ ಕೊಟ್ಟು ವೃದ್ದರ ರಕ್ಷಣೆಗೆ ಮುಂದಾಗಬೇಕಾಗಿದೆ. ಸಂಘ-ಸಂಸ್ಥೆಗಳು ವೃದ್ದರ ಸಮಸ್ಯೆಗಳನ್ನು ಗಂಭೀರತೆಯಿಂದ ಅವಲೋಕಿಸಿ ಕೆಲವೊಂದು ಮಹತ್ವದ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಬೇಕಾಗುತ್ತದೆ. ಸಾರ್ವಜನಿಕರು ವೃದ್ದರಿಗೆ ಗೌರವ ಕೊಟ್ಟು ಅವರಿಗೆ ಆಶ್ರಯ ನೀಡಬೇಕಾಗಿದೆ.

**ಸರಕಾರ, ಸಂಘ-ಸಂಸ್ಥೆಗಳಿಂದ ನೆರವು**

- ವೃದ್ಧಾಪ್ಯ ವೇತನ ಹೆಚ್ಚಳ.
- ಆರ್ಥಿಕ ಭದ್ರತೆ ಒದಗಿಸುವುದು.
- ಸ್ವಯಂ ಉದ್ಯೋಗಕ್ಕಾಗಿ ತರಬೇತಿ ನೀಡುವುದು ಮತ್ತು ಬಡ್ಡಿರಹಿತ ಸಾಲ ಒದಗಿಸುವುದು.
- ಉತ್ತಮ ಪರಿಸರ ಒದಗಿಸುವುದು.
- ವೃದ್ಧಾಶ್ರಮಗಳನ್ನು ಸ್ಥಾಪಿಸುವುದು. ಮುಂತಾದವುಗಳು.

**೧೦. ಸ್ವಯಂ ಉದ್ಯೋಗಕ್ಕೆ ತರಬೇತಿ ನೀಡುವುದು :**

ಸಮಾಜದಲ್ಲಿ ಕೆಲವು ವೃದ್ದರು ಸ್ವಾಭಿಮಾನದ ಜೀವನವನ್ನು ನೆಡೆಸಿಕೊಂಡು ಹೋಗುವಂತ ವ್ಯಕ್ತಿತ್ವವನ್ನು ಹೊಂದಿದವರಾಗಿರುತ್ತಾರೆ. ಸಮಾಜದಲ್ಲಿ ಯಾರ ಮುಂದೆಯೂ ಕೈಯನ್ನು ಚಾಚುವವರಾಗಿರುವುದಲ್ಲ. ವಯಸ್ಸಾದವರು ಸ್ವತಃ ದುಡಿಮೆಯಿಂದಲೇ ಬದುಕನ್ನು ಸಾಗಿಸುವಂತಹ- ವರಾಗಿರುತ್ತಾರೆ. ಅಂತಹ ವ್ಯಕ್ತಿತ್ವ ಹೊಂದಿದ ವೃದ್ದರನ್ನು ಗುರುತಿಸಿ ಸ್ವಯಂ ದುಡಿದು ಜೀವನ ನೆಡೆಸಿಕೊಂಡು ಹೋಗುವುದಕ್ಕೆ ಅನುಕೂಲ ಮಾಡಿಕೊಡ ಬೇಕಾಗುತ್ತದೆ. ವೃದ್ದಾಪ್ಯದಲ್ಲಿ ಅವರ ಶಕ್ತಿ ಸಾಮರ್ಥ್ಯಕ್ಕೆ ತಕ್ಕಂತೆ ಉದ್ಯೋಗಗಳನ್ನು ಸೃಷ್ಟಿಸಿ ಆ ಉದ್ಯೋಗಗಳನ್ನು ಮಾಡಲು ಮುಕ್ತವಾದ ಅವಕಾಶ ಕಲ್ಪಿಸ ಬೇಕಾಗಿದೆ. ಮತ್ತು ವೃತ್ತಿಪರ

ತರಬೇತಿಗಳನ್ನು ವೃದ್ದರಿಗಾಗಿಯೇ ಜಾರಿಗೆ ತರಬೇಕಾಗಿದೆ. ಮತ್ತು ಸ್ವಯಂ ಉದ್ಯೋಗಕ್ಕೆ ತರಬೇತಿ ನೀಡಿ ಅವರು ಉತ್ಪಾದಕ ವಸ್ತುಗಳಿಗೆ ಉತ್ತೇಜನ ನೀಡಬೇಕಾಗಿರುತ್ತದೆ. ಇದರಿಂದ ವಯೋವೃದ್ದರು ಸಮಾಜದಲ್ಲಿ ಸ್ವಾಭಿಮಾನ ಬದುಕನ್ನು ಸಾಗಿಸುವುದಕ್ಕೆ ಸಾಧ್ಯವಾಗುವುದು. ಇದಕ್ಕೆ ಎಲ್ಲರ ಸಹಕಾರ ಅವಶ್ಯಕತೆ ಇರುತ್ತದೆ.

## ೧೧. ಕುಟುಂಬದಲ್ಲಿ ವೃದ್ಧರ ರಕ್ಷಣೆ :

'ಭಾರತದ ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯಲ್ಲಿ ವೃದ್ದರ ಸಮಸ್ಯೆಗಳು, ತೊಂದರೆಗಳು ಕುಟುಂಬದ ಇತರ ಸದಸ್ಯರಿಗಿಂತ ಭಿನ್ನವಾಗೇನೂ ಇರಲಿಲ್ಲ. ಅಲ್ಲದೆ ವೃದ್ದರ ಸಮಸ್ಯೆಗಳು ಗಂಭೀರವಾದ ಸಮಸ್ಯೆಯಾಗಿರಲಿಲ್ಲ. ಕಾರಣ ಕುಟುಂಬದ ಎಲ್ಲಾ ಸದಸ್ಯರೂ ಒಟ್ಟಾಗಿ ಕುಟುಂಬದ ಸಂತೋಷ ಮತ್ತು ದುಃಖಗಳನ್ನು ಅನುಭವಿಸುತ್ತಿದ್ದರು. ವೃದ್ದರಿಗೆ, ಹಿರಿಯರಿಗೆ ಗೌರವ ನೀಡುವುದು ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯ ಮೂಲಭೂತ ಲಕ್ಷಣವಾಗಿತ್ತು. "ಮಾತೃ ದೇವೋಭವ, ಪಿತೃ ದೇವೋಭವ" ಎಂಬುದು ಹಿರಿಯರಿಗೆ ನಾವು ತೋರುವ ಗೌರವವಾಗಿದೆ. ಈ ಅಂಶಗಳು ಶಾಸನ ಹಾಗೂ ಸಾಹಿತ್ಯಗಳಿಂದ ನಮಗೆ ತಿಳಿಯುತ್ತದೆ.[3]

'ಕಷ್ಟದ ಸಮಯದಲ್ಲಿ ಅಂದರೆ(ಅನಾರೋಗ್ಯದಲ್ಲಿ) ಕುಟುಂಬದ ಸದಸ್ಯರು ಮತ್ತು ಅಲ್ಲಿನ ಸಾಮಾಜಿಕ ವ್ಯವಸ್ಥೆಯು ವೃದ್ದರ ಅವಶ್ಯಕತೆಗಳಿಗೆ ತಕ್ಕಂತೆ ಪಾಲನೆ ಹಾಗೂ ರಕ್ಷಣೆಯನ್ನು ನೀಡಲು ಹೇಗೆ ಮುಂದಾಗುವುದು ಎಂಬುದನ್ನು ಚರ್ಚಿಸುವುದು. ಯುವಕರು ವಿಶೇಷವಾಗಿ ಕಿರಿಯರು ತಮ್ಮ ಹಿರಿಯ ತಂದೆ-ತಾಯಿಗಳ ಪಾಲನೆ ಮತ್ತು ಪೋಷಣೆಯ ಬಗ್ಗೆ ವ್ಯಕ್ತಪಡಿಸುವ ಅಭಿಪ್ರಾಯ ಕಂಡುಕೊಳ್ಳ ಬೇಕಿದೆ.[4]

'ಸರ್ಕಾರಿ ನೀತಿ ನಿಯಮಗಳ ವಿಶೇಷ ವಿನಾಯಿತಿಗಳನ್ನು ಆದಾಯ ತೆರಿಗೆಯಲ್ಲಿ ನೀಡುವುದರ ಜೊತೆಗೆ ಇನ್ನಿತರ ಸೌಲಭ್ಯಗಳನ್ನು ನೀಡಿ ಮಕ್ಕಳು ತಮ್ಮ ಜೊತೆಯಲ್ಲಿ ತಂದೆ-ತಾಯಿಗಳನ್ನು ಇಟ್ಟು ಕೊಂಡು ಇಳಿ ವಯಸ್ಸಿನಲ್ಲಿ ರಕ್ಷಣೆ/ಪಾಲನೆ ಮಾಡಲು ಉತ್ತೇಜಿಸಬೇಕು.[5] 'ವೃದ್ದರು ಸಮಾಜದಲ್ಲಿ ಇತರರ ಮೇಲೆ ಅವಲಂಬಿತವಾಗುವ ಮತ್ತು ಇತರರಿಂದ ತಿರಸ್ಕೃತ

ಭಾವನೆಗೊಳಪಡುವುದನ್ನು ತಪ್ಪಿಸಬೇಕು.[6] ಪ್ರತಿಯೊಬ್ಬ ವ್ಯಕ್ತಿಯು ವೃದ್ದರ ಸಮಸ್ಯೆಗಳಿಗೆ ಸ್ಪಂದಿಸುವ ಬಂಧನಕ್ಕೊಳಪಡುವಂತೆ ಮಾಡುವಷ್ಟು ಅಣಿಯಾಗಿಸಬೇಕು.

## ೧೨. ಕರ್ನಾಟಕದಲ್ಲಿ ವೃದ್ಧರ ರಕ್ಷಣೆ :

'ಆಧುನಿಕ ಕಾಲದಲ್ಲಿ ಕರ್ನಾಟಕದಲ್ಲಿ ವೃದ್ದರ ರಕ್ಷಣೆಯು ಬೇರೆ ರಾಜ್ಯಗಳಿಗಿಂತ ಬಹಳ ಮೊದಲು ಪ್ರಾರಂಭವಾಯಿತು. ೧೯೩೦ ರಷ್ಟು ಹಿಂದೆ ಬೆಂಗಳೂರಿನಲ್ಲಿ 'ಫ್ರೆಂಡ್ ಇನ್ ನೀಡ್ ಸೊಸೈಟಿ' ಯು ಒಂದು ವೃದ್ದರ ಮನೆಯನ್ನು ಸ್ಥಾಪಿಸಿತು. ಇದು ಭಾರತದ ಮೊಟ್ಟ ಮೊದಲನೆಯ ವೃದ್ದರಮನೆ.[7] 'ಬೆಂಗಳೂರಿನ ಹೊಸೂರು ರಸ್ತೆಯಲ್ಲಿರುವ ವೃದ್ಧಾಶ್ರಮವು ೧೯೦೦ ರಲ್ಲಿ ಪ್ರಾರಂಭವಾಯಿತು. ಇಲ್ಲಿ ಸುಮಾರು ೨೦೦ ಮಂದಿ ವೃದ್ದ ಸ್ತ್ರೀ ಪುರುಷರಿಗೆ ಆಶ್ರಯ ಕೊಡಲಾಗಿದೆ. ಇವರೆಲ್ಲರೂ ಬಡವರು, ನಿರ್ಗತಿಕರು ಮತ್ತು ಅಂಗವಿಕಲರು ಇಲ್ಲಿ ಜಾತಿ, ಮತ, ಧರ್ಮಗಳ ಭೇದವಿಲ್ಲ.[8]

'ಬಡವರಿಗೆ ಆಶ್ರಯ ಕೊಡುವ ಮತ್ತೊಂದು ಸಂಸ್ಥೆಯಂದರೆ "ಅಶಕ್ತ ಪೋಷಕ ಮನೆ" ಈ ವಸತಿ ಗೃಹವು ಸದ್ಯ ಸುಮಾರು ೭೦ ಸ್ತ್ರೀ ಪುರುಷರಿಗೆ ಆಶ್ರಯ ಕೊಡುತ್ತಿದೆ.[9] 'ಬೆಂಗಳೂರಿನ ಹೊರಗೂ ಬೆರಳಿನ ಮೇಲೆ ಎಣಿಸುವಷ್ಟು ವೃದ್ದರ ಗೃಹಗಳಿವೆ. ಮೈಸೂರಿನ ಶಂಕರ ಮಠದ ಹತ್ತಿರದಲ್ಲಿರುವ 'ಭಾರತೀಯ ವೃದ್ಧಾಶ್ರಮ' ಶೃಂಗೇರಿ ಮಠದ ಆವರಣದಲ್ಲಿರುವ ಈ ವೃದ್ಧಾಶ್ರಮದಲ್ಲಿ ಸದ್ಯ ಬ್ರಾಹ್ಮಣ ವಿಧವೆಯರೇ ಆಶ್ರಯ ಪಡೆದಿದ್ದಾರೆ. ಇದನ್ನು ವಿಸ್ತರಿಸಿ ಎಲ್ಲಾ ನಿರ್ಗತಿಕ ಜನರಿಗೆ ಮುಕ್ತ ಮಾಡುವ ಯೋಜನೆ ಇದೆ. 'ಲಿಟಿಕ್ ಸಿಸ್ಟರ್ ಆಫ್ ದಿ ಪೊರ್' ಸಂಸ್ಥೆಯವರು ಮೈಸೂರಿನಲ್ಲಿಯೂ ಒಂದು ವೃದ್ಧಾಶ್ರಮ ನೆಡೆಸುತ್ತಿದ್ದಾರೆ.[10] ಹಾವೇರಿ ಹತ್ತಿರ ಇರುವ ಕರ್ಜಗಿ ರೈಲು ನಿಲ್ದಾಣದ ಬಳಿ ಒಂದು ವೃದ್ಧಾಶ್ರಮ ತೆರೆದಿದ್ದಾರೆ. 'ಮಂಗಳೂರಿನ ಹತ್ತಿರ ಇರುವ ಕೋಣಾಜೆಯಲ್ಲಿ ಖಾಸಗಿ

ಸಂಘಟನೆಯೊಂದು ೧೯೭೨ ರಲ್ಲಿ 'ಅಭಯ ಆಶ್ರಯ' ಎಂಬ ವೃದ್ದರ ನಿರ್ಗತಿಕರ ಆಶ್ರಯವೊಂದನ್ನು ನೆಡೆಸುತ್ತಿದೆ. ಇದೇ ಜಿಲ್ಲೆಯ ಕಲ್ಯಾಣಪುರದಲ್ಲಿ 'ಬಿಜನಮ್ ವೃದ್ದರ ಗೃಹ' ಇತ್ತೀಚೆಗೆ ಪ್ರಾರಂಭವಾಗಿದೆ.[11]

## ೧೩. ವೃದ್ಧಾಪ್ಯದ ಬಗೆಗೆ ಸತ್ಯ ಸಂಗತಿಗಳು :

- ವೃದ್ಧಾಪ್ಯವು ಒಂದು ಸಹಜ ಹಂತ.
- ವೃದ್ಧಾಪ್ಯವು ಅಪಾಯಕಾರಿಯೂ ಅಲ್ಲ, ಭೀಕರವೂ ಅಲ್ಲ.
- ವೃದ್ಧಾಪ್ಯವು ರೋಗವಲ್ಲ, ಶಾಪದ ಫಲವಲ್ಲ.
- ವೃದ್ಧಾಪ್ಯವು ಶರೀರಕ್ಕೆ ಹೊರತು ಚೈತನ್ಯಕ್ಕಲ್ಲ.
- ವೃದ್ಧಾಪ್ಯವು ಒಂದು ಶಾರೀರಿಕ ಅಗತ್ಯ

## ೧೪. ವೃದ್ಧರಿಗೆ ಕೆಲವೊಂದು ಸಲಹೆಗಳು :

ಸರ್ ಜೇಮ್ಸ್ ರಾಜ್‌ರವರ ಪ್ರಕಾರ : ವೃದ್ಧಾಪ್ಯವನ್ನು ಗುಣಪಡಿಸಲಾಗುವುದಿಲ್ಲ. ಆದರೆ ಅದನ್ನು ಮುಂದೂಡಬಹುದು. ಇದು ಜೀವನದಲ್ಲಿ ಕೆಲವು ನಿಯಮಗಳನ್ನು ಅನುಸರಿಸುವುದರಿಂದ ಮಾತ್ರ ಸಾಧ್ಯ

- ಧೂಮಪಾನ, ಮದ್ಯಪಾನ ಮತ್ತು ಮಾದಕ ಪದಾರ್ಥಗಳನ್ನು ಸೇವಿಸಬಾರದು.
- ವೈದ್ಯರ ಸಲಹೆಯಿಲ್ಲದೆ ಅನಾವಶ್ಯಕವಾಗಿ ಯಾವುದೇ ಔಷಧ ಸೇವಿಸಬಾರದು.
- ಯಾವುದಾದರು ಆರೋಗ್ಯ ತೊಂದರೆಗಳು ಕಂಡು ಬಂದರೆ ಯೋಗ್ಯ ಚಿಕಿತ್ಸೆ ಹಾಗೂ ಉಪಚಾರ ಹೊಂದಬೇಕು.

- ಆಘಾತ ಮತ್ತು ಅಪಘಾತಗಳ ಬಗ್ಗೆ ಹೆಚ್ಚಿನ ಎಚ್ಚರಿಕೆ ವಹಿಸಬೇಕು.
- ಹಿತಮಿತವಾದ ವ್ಯಾಯಾಮ, ಶುದ್ಧವಾಯು ಸೇವನೆ ಮಾಡಬೇಕು.
- ಅವಶ್ಯಕತೆಗಿಂತ ಹೆಚ್ಚು ತೂಕವಾಗದಂತೆ ಎಚ್ಚರಿಕೆ ವಹಿಸಬೇಕು.
- ಅಲಸ್ಯಕ್ಕೆ ಅವಕಾಶ ಕೊಡಬಾರದು.
- ವೃದ್ಧಾಪ್ಯದ ಬಗ್ಗೆ ಅನಗತ್ಯ ಚಡಪಡಿಸುವಿಕೆ ಹಾಗೂ ಹತಾಶರಾಗುವುದನ್ನು ಬಿಡಬೇಕು.
- ಸಕಲ ರೋಗಗಳಿಗೆ ಮೂಲ ಬಹಳ ಮಟ್ಟಿಗೆ ಮಲಬದ್ಧತೆ, ಆದ್ದರಿಂದ ಮಲಬದ್ಧತೆ ಆಗದಂತೆ ನೋಡಿಕೊಳ್ಳಬೇಕು.
- ಊಟ ಬಲ್ಲವನಿಗೆ ರೋಗವಿಲ್ಲ, ಹಿತಮಿತವಾಗಿ ತಿನ್ನಬೇಕು.
- ಹಸಿಯದಿದ್ದರೂ ಊಟ ಮಾಡುವುದು ಬೇಡ. ಹಸಿವಿನಲ್ಲೇ ಇರುವುದು ಬೇಡ. ಹೆಚ್ಚಿನ ಬಿಸಿಯೂ ಬೇಡ, ತಂಗಳೂ ಬೇಡ.
- ಮಾನಸಿಕವಾಗಿ ಆರೋಗ್ಯದಿಂದಿರಬೇಕು, ಚಿಂತೆಯನ್ನು ಮಾಡಬಾರದು.

## 4.3 – ವಯೋವೃದ್ಧರ ಜೀವನ ವೃತ್ತಾಂತಗಳು

ಹಲವಾರು ಜನ ವಯೋವೃದ್ದರು ತಮ್ಮ ಬದುಕಿನ ಅನುಭವಗಳನ್ನು ಹಂಚಿಕೊಂಡಿದ್ದಾರೆ. ಅವುಗಳಲ್ಲಿ ಪ್ರಮುಖವಾದ ವಯೋವೃದ್ಧರ ಅನುಭವಗಳನ್ನು ಹೀಗಿವೆ.

**1) ನಿಂಗಪ್ಪ ತಂದೆ ಮಲ್ಲಪ್ಪ**

ಯಾದಗಿರಿ ತಾಲ್ಲೂಕಿನ ಗಾಜರಕೋಟ ಗ್ರಾಮದವನಾದ ನಿಂಗಪ್ಪನವರು ಬದುಕನ್ನು ಕಟ್ಟಿಕೊಳ್ಳಲು ಯಾದಗಿರಿ ಪಟ್ಟಣಕ್ಕೆ ಬಂದು ಕೂಲಿ ನಾಲಿ ಮಾಡಿಕೊಂಡು ತುಂಬು ಜೀವನ ಸಾಗಿಸಿದರು. 65 ವಸಂತಗಳನ್ನು ಕಳೆದಿರುವ ನಿಂಗಪ್ಪನವರು ತಮ್ಮ ಮುಪ್ಪಿನ ವಯಸ್ಸಿನ ಮುಗ್ದ ಅನುಭವಗಳನ್ನು ಹೀಗೆ ಹೇಳಿದ್ದಾರೆ. ನಾಲ್ಕು ಹೆಣ್ಣು ಮಕ್ಕಳು ಮತ್ತು ಇಬ್ಬರು ಗಂಡು ಮಕ್ಕಳು ಸಂಗಾತಿ ಹುಸೇನಮ್ಮಳೊಂದಿಗೆ ಬಹಳ ಕಷ್ಟದಿಂದ ಬದುಕುತ್ತ ಬಂದಿದ್ದೇನೆ. ನೆರೆಹೊರೆಯವರಿಂದ, ಸಮಾಜದವರಿಂದ ಹಲವಾರು ರೀತಿಯ ಅಪಮಾನ, ಅವಮಾನ, ಮತ್ತು ಕಷ್ಟಗಳನ್ನು ಅನುಭವಿಸಿದ್ದೇನೆ. ಸರಕಾರವು ಕೊಡುವ ಪಿಂಚಣಿಯಿಂದ ಹಾಗೂ ಒಂದು ವೈನ್‌ಶಾಪ್‌ಲ್ಲಿ ಕೆಲಸಮಾಡುತ್ತ ಸಂಸಾರ, ಮಕ್ಕಳ ಶಾಲೆಯನ್ನು ನಡೆಸುತ್ತಿದ್ದೇನೆ. ಅವರು ನಾಳೆ ಚೆಂದ ಸಾಲೆ ಕಲ್ತು ಯಾವುದಾದರು ಉದ್ಯೋಗ ಮಾಡಿ ತಮ್ಮ ಕಾಲ ಮೇಲೆ ತಾವು ನಿಂತುಕೊಂಡರೆ ನನ್ನ ಬದುಕು ಸಾರ್ಥಕವಾಗುತ್ತೆದೆ ಎಂದು ಆಶಾ ಭಾವನೆಯಿಂದ ಹೇಳುತ್ತಾನೆ.

**2) ಬನ್ನೆಪ್ಪ ತಂದೆ ಚೆನ್ನಪ್ಪ.**

ಯಾದಗಿರಿ ತಾಲ್ಲೂಕಿನ ಮೈಲಾಪುರ ದೇವಸ್ಥಾನದಲ್ಲಿ ವಾಸಮಾಡುತ್ತಿರುವ ಬನ್ನೆಪ್ಪ 65ರ ಇಳಿಯ ವಯಸ್ಸಿನ ಜೀವ. ಈತನಿಗೆ ಮಕ್ಕಳು ಮೊಮ್ಮಕ್ಕಳು ಆಸ್ತಿ ಅಂತಸ್ತು ಎಲ್ಲಾ ಇದ್ದರು ಏನು ಇಲ್ಲದಂತಹ ಬದುಕು ಸಾಗಿಸುತ್ತಿದ್ದಾನೆ. ಬಾಳಿನ ಸಂಗಾತಿಯನ್ನು ಕಳೆದುಕೊಂಡಿರುವುದು ಬನ್ನೆಪ್ಪನಿಗೆ ಇಬ್ಬರು ಗಂಡು ಮಕ್ಕಳಿದ್ದಾರೆ. ತಮ್ಮ ಜೀವನದ ಹಲವಾರು ಕಷ್ಟಗಳಲ್ಲಿ ಮಕ್ಕಳನ್ನು ಓದಿಸಿ ದೊಡ್ಡವರು ಮಾಡಿದ್ದಾನೆ. ಇಂದು ಮಕ್ಕಳು ಒಕ್ಕಲುತನಮಾಡುತ್ತ ತಮ್ಮ ಹೆಂಡರು ಮಕ್ಕಳೊಂದಿಗೆ ಜೀವನ ಸಾಗಿಸುತ್ತಿದ್ದಾರೆ. ಮನೆಗೆ ಬಂದ ಸೊಸೆಯಂದಿರು ಬನ್ನೆಪ್ಪನಿಗೆ ಸರಿಯಾಗಿ ನೋಡಿಕೊಳ್ಳದೆ ಹಲವು ರೀತಿಯಿಂದ ಕಿರುಕುಳ ಕೊಡತೊಡಗಿದರು. ಮಾನಸಿಕವಾಗಿ ನೊಂದ ಬನ್ನೆಪ್ಪ ಮೈಲಾಪುರ ದೇವಾಸ್ಥಾನದಲ್ಲಿ ಬಿಕ್ಷೆ ಬೇಡಿ ಮತ್ತು ದೇವರ ಪ್ರಸಾದ ಸ್ವೀಕರಿಸಿ ಜೀವನ ಸಾಗಿಸುತ್ತಿದ್ದಾನೆ.

**3) ಅಬ್ದುಲ್ ಭಾಷಾ**

5 ಗಂಡು 3 ಹೆಣ್ಣು ಮಕ್ಕಳ ತಂದೆಯಾಗಿರುವ ಅಬ್ದುಲ್ ಭಾಷಾನಿಗೆ ಪತ್ನಿ ಜಹೀದಾಬೇಗಮ್ ತೀರಿಕೊಂಡಿದ್ದಾಳೆ. ತನ್ನ ಎಲ್ಲಾಮಕ್ಕಳಿಗೆ ಮದುವೆ ಮಾಡಿ ಕೈ ತೊಳೆದು ಕೊಂಡಿರುವ ಅಬ್ದುಲ್ ಭಾಷಾ ಮೊಮ್ಮಕ್ಕಳು ಕಂಡಿದ್ದಾರೆ. ಆದರೆ ಮಕ್ಕಳ, ಸೊಸೆಯಂದಿರ, ಮೊಮ್ಮಕ್ಕಳಿಂದ ಸಿಗಬೇಕಾದ ಪ್ರೀತಿ,ವಾತ್ಸಲ್ಯ, ಅನುಕಂಪ ಯಾವುದು ಕಾಣಲಿಲ್ಲ. ಇವರಿಂದ ಕಂಡಿದ್ದು ಬರಿ ಕಿರುಕುಳ ಶೋಷಣೆ ಇದರಿಂದ ಬಹಳಷ್ಟು ನೊಂದುಕೊಂಡು ಅಬ್ದುಲ್ ಭಾಷಾ ಐಸ್ಕ್ರೀಮ್ ಮಾರಾಟಮಾಡಿ ತನ್ನ ಬದುಕನ್ನು ಸಾಗಿಸುತ್ತಿದ್ದಾನೆ. ಮುಪ್ಪಿನ ವಯಸ್ಸಿನಲ್ಲಿ

ಮಕ್ಕಳ ಆಶ್ರಯದಲ್ಲಿ ವಿಶ್ರಾಂತ ಬದುಕನ್ನು ಸಾಗಿಸಬೇಕಾದ ಅಬ್ದುಲ್ ಭಾಷ 63ರ ಇಳಿಯ ವಯಸ್ಸಿನಲ್ಲಿ ಕೂಡ ದುಡಿದು ಕಷ್ಟಕರ ಜೀವನ ಸಾಗಿಸುತ್ತಿದ್ದಾನೆ.

**4) ಲಲಿತಾಬಾಯಿ.**

ಲಲಿತಾಬಾಯಿಯ ಅನುಭವಗಳನ್ನು ಕೇಳಿದರೆ ನಮ್ಮ ಕಣ್ಣಲ್ಲಿ ನೀರು ಬರುತ್ತದೆ. ಮದುವೆಯಾಗಿ ನಾಲ್ಕು ವರ್ಷದಲ್ಲಿ ಏಳು ತಿಂಗಳು ಬಸುರಿಯಾಗಿದ್ದಾಗ ಗಂಡ ರಾಮಾಸ್ವಾಮಿಯನ್ನು ಕಳೆದುಕೊಂಡ ನತದೃಷ್ಟಿ. ಮುಂದೆ ಗಂಡು ಮಗುವಿಗೆ ಜನ್ಮ ನೀಡಿ ಯಾರು ಹಂಗು ಇರಲಾರದೆ ಕೂಲಿನಾಲಿ ಮಾಡಿ ಮಗನನ್ನು ಓದಿಸಿ ಬೆಳೆಸಿದಳು. ಮುಂದೆ ಮಗ ಸರಕಾರಿ ಉದ್ಯೋಗ ಕೂಡ ಪಡೆದುಕೊಂಡ. ತನ್ನ ಬಳ್ಳಿ ಹಬ್ಬುಲೆಂದು ಮಗನಿಗೆ ಸುಂದರಿಯಾದ ಕನ್ಯೆ ತಂದು ಮದುವೆ ಮಾಡಿದಳು ಆದರೆ ಸೊಸೆ ಅತ್ತೆ ಲಲೊತಾಬಾಯಿಗೆ ಯಾವುದೆ ಸುಖ, ಶಾಂತಿ, ನೆಮ್ಮದಿ ನೀಡಲಿಲ್ಲ. ಅಲ್ಲದೆ ಅತ್ತೆಯನ್ನು ಒಂದುದಿನ ಕೂಡ ಪ್ರೀತಿಯಿಂದ ಮಾತನಾಡಿಸಲಿಲ್ಲ. ಸೊಸೆ ಎಷ್ಟೆ ಕಿರುಕುಳ ಕೊಟ್ಟರು ಕೂಡ ಮಗನ ಮುಂದೆ ತನ್ನ ನೋವುಗಳನ್ನು ಹೇಳದೆ ತಾನೇ ನುಂಗಿಕೊಂಡಲು. ಮಗನಾದರು ಕೂಡ ಒಂದು ದಿನ ತಾಯಿಯ ಯೋಗಕ್ಷೇಮ ವಿಚಾರಿಸಲಿಲ್ಲ. ಸೊಸೆಯ ಕಿರುಕುಳವನ್ನು ತಾಳಲಾರದೆ ಮಗನಿಗೆ ಮತ್ತು ಸೊಸೆಗೆ ದೇವರು ಒಳ್ಳೆಯದು ಮಾಡಲಿ ಎಂದು ಹಾರೈಸಿ ಮನೆಯಿಂದ ಹೊರಗೆ ಬಂದು ಬಿಕ್ಷೆಬೇಡಿ ಗುಡಿ ಗುಂಡಾರಗಳ, ಬಸ್‌ನಿಲ್ದಾಣದಲ್ಲಿ ಬಿದ್ದು ಬದುಕುತ್ತಿದ್ದಾಳೆ.

ಹೀಗೆ ಭೀಮಣ್ಣ, ಶರಣಪ್ಪ, ವೆಂಕಟಪ್ಪ ಮುಂತಾದವುರು ತಮ್ಮ ಬದುಕಿನ ಮುಸ್ಸಂಜೆಯಲ್ಲಿ ಎದುರಿಸಿದ ತಲ್ಲಣಗಳು ನೋವುಗಳು, ಅನುಭವಿಸಿ ಬೀದಿಪಾಲಾಗಿ ಬದುಕುತ್ತಿರುವ ತಮ್ಮ ಸ್ಥಿತಿಗತಿಗಳನ್ನು ಕಣ್ಣಿಗೆ ಕಟ್ಟು ಹಾಗೆ ಹೇಳಿದ್ದಾರೆ.

## ಅಡಿ ಟಿಪ್ಪಣಿಗಳು

1. ಡಾ. ಕೆ. ಜಿ. ಗುರಮೂರ್ತಿ – ವೃದ್ಧಾಪ್ಯ : ಸಮಸ್ಯೆಗಳು ಹಾಗೂ ನಿವರಣೆಗಳು – 1999 ಪ್ರ. ಕರ್ನಾಟಕ ವಿ.ವಿ. ದಾರವಾಡ ಪು.ಸಂ –27/28
2. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ–61/62
3. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ–65
4. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ–65
5. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ–66
6. ಡಾ. ಎಚ್. ಡಿ ಪ್ರಶಾಂತ್ – ವೃದ್ಧರ ಪರಿಕಲ್ಪನೆ – 2003–ಪ್ರಸಾರಂಗ ಕ.ವಿ.ವಿ. ಹಂಪಿ. ಪು.ಸಂ–66

7. ಎಚ್. ವಿ. ನಾಗೇಶ್ – ವೃದ್ಧರು ಮತ್ತು ಅವರ ರಕ್ಷಣೆ 1986 –
ಕರ್ನಾಟಕ ವಿ.ವಿ. ದಾರವಾಡ ಪು.ಸಂ –28

8. ಎಚ್. ವಿ. ನಾಗೇಶ್ – ವೃದ್ಧರು ಮತ್ತು ಅವರ ರಕ್ಷಣೆ 1986 –
ಕರ್ನಾಟಕ ವಿ.ವಿ. ದಾರವಾಡ ಪು.ಸಂ –29

9. ಎಚ್. ವಿ. ನಾಗೇಶ್ – ವೃದ್ಧರು ಮತ್ತು ಅವರ ರಕ್ಷಣೆ 1986 –
ಕರ್ನಾಟಕ ವಿ.ವಿ. ದಾರವಾಡ ಪು.ಸಂ –29

10. ಎಚ್. ವಿ. ನಾಗೇಶ್ – ವೃದ್ಧರು ಮತ್ತು ಅವರ ರಕ್ಷಣೆ 1986 –
ಕರ್ನಾಟಕ ವಿ.ವಿ. ದಾರವಾಡ ಪು.ಸಂ –30/31

11. ಎಚ್. ವಿ. ನಾಗೇಶ್ – ವೃದ್ಧರು ಮತ್ತು ಅವರ ರಕ್ಷಣೆ 1986 –
ಕರ್ನಾಟಕ ವಿ.ವಿ. ದಾರವಾಡ ಪು.ಸಂ –31

12. ಎಚ್. ವಿ. ನಾಗೇಶ್ – ವೃದ್ಧರು ಮತ್ತು ಅವರ ರಕ್ಷಣೆ 1986 –
ಕರ್ನಾಟಕ ವಿ.ವಿ. ದಾರವಾಡ ಪು.ಸಂ –31

13. ಎಚ್. ವಿ. ನಾಗೇಶ್ – ವೃದ್ಧರು ಮತ್ತು ಅವರ ರಕ್ಷಣೆ 1986 –
ಕರ್ನಾಟಕ ವಿ.ವಿ. ದಾರವಾಡ ಪು.ಸಂ –36

14. ಪ್ರೋ. ಕೆ. ಬೈರಪ್ಪ – ಭಾರತದ ಪ್ರಚಲಿತ ಸಾಮಾಜಿಕ ಸಮಸ್ಯೆಗಳು –
2006 ಸ್ವಪ್ನ ಬುಕ್ ಹೌಸ್ ಬೆಂಗಳೂರು. ಪು.ಸಂ–36

## ಸಮಾರೋಪ

ಆಧುನಿಕ ಸಮಾಜದಲ್ಲಿ ವಯೊವೃದ್ಧರು ಹಲವಾರು ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಇಂದಿನ ಆಧುನೀಕರಣ, ನಗರೀಕರಣದದ ಪ್ರಭಾವದಿಂದ ಸಂಪ್ರದಾಯದ ಕುಟುಂಬ ವ್ಯವಸ್ಥೆಯು ಶಿಥಿಲಗೊಂಡಿವೆ. ವೈಯಕ್ತಿಕ ಆಸೆ ಆಕಾಂಕ್ಷೆಗಳಿಂದ ಮತ್ತು ಸ್ವಾರ್ಥ ಮನೋಭಾವನೆಯಿಂದ ವೃದ್ಧರ ಸಮಸ್ಯೆಗಳು ಇನ್ನಿಷ್ಟು ಬಲಿಷ್ಠಗೊಳ್ಳುತ್ತಿವೆ. ಆಧುನಿಕ ಸಮಾಜದಲ್ಲಿ ವಯೋವೃದ್ಧರಿಗೆ ಸಿಗಬೇಕಾವ ಸೌಲಭ್ಯಗಳು ಸಿಗುತ್ತಿಲ್ಲ. ಮತ್ತು ವೃದ್ಧರಿಗೆ ಯಾವುದೇ ರೀತಿಯ ಗೌರವವನ್ನು ತೋರಿಸುವ ವ್ಯಕ್ತಿಗಳು ಕಾಣಿಸುತ್ತಿಲ್ಲ. ಕುಟುಂಬದಲ್ಲಿ ವೃದ್ಧರ ಸ್ಥಾನಮಾನ ಕುಗ್ಗುತ್ತಿದೆ. ಸಮಾಜದಲ್ಲಿ ವೃದ್ಧರ ಜೀವನ ಶೋಚನೀಯ ಸಂಗತಿಗೆ ತಲುಪಿರುತ್ತದೆ. ವೃದ್ಧರು ತಮ್ಮ ಜೀವನವನ್ನು ಸಾಗಿಸುವುದು ದುರುಪಸ್ಥಿತಿ ನಿರ್ಮಾಣವಾಗಿದೆ. ಸಮಾಜದಲ್ಲಿ ವೃದ್ಧರು ಶೋಷಣೆಗೆ ಒಳಗಾಗಿರುತ್ತಾರೆ. ಸಮಾಜದಲ್ಲಿ ವೃದ್ಧರನ್ನು ಕನಿಷಠ ದೃಷ್ಟಿಯಿಂದ ನೋಡುತ್ತಿರುವುದು ಕಂಡುಬರುತ್ತಿದೆ. ಕೆಲವೊಂದು ವೃದ್ಧರು ಪರಾವಲಂಬಿಗಳಾಗಿ ಜೀವನ ಸಾಗಿಸುತ್ತಿದ್ದಾರೆ. ಅನೇಕ ವೃದ್ಧರಿಗೆ ಸೂಕ್ತವಾದ ರಕ್ಷಣೆಯ ಇರುವುದಿಲ್ಲ. ಸಮಾಜದಲ್ಲಿ ಸಾಮಜಿಕ ಭದ್ರತೆ ಕಂಡುಬರುತ್ತಿಲ್ಲ. ಮೂಲಭೂತ ಸೌಕರ್ಯಗಳು ದೊರೆಯುತ್ತಿಲ್ಲ ಮುಂತಾದ ಸಮಸ್ಯೆ ವೃದ್ಧರನ್ನು ದಿನ, ಪ್ರತಿಕ್ಷಣ ಕಾಣುವ ಸಮಸ್ಯೆಗಳಾಗಿವೆ. ಇಂತಹ ಸಮಸ್ಯೆಗಳನ್ನು ಎದುರಿಸುತ್ತಿರುವ ವೃದ್ಧರನ್ನು ಗುರುತಿಸಿ ಮತ್ತು ಅಂತಹ ವೃದ್ಧರಿಗೆ ಶಾಶ್ವತವಾದ ರಕ್ಷಣೆ, ಮತ್ತು ಸೂಕ್ತವಾದ ಪರಿಹಾರ ಮತ್ತು ಮೂಲಭೂತ

ಸೌಲಭ್ಯಗಳನ್ನು ಒದಗಿಸುವುದು ಮಾನವೀಯತೆಯ ಮೌಲ್ಯಗಳಲ್ಲಿ ಒಂದಾಗಿದೆ. ಮತ್ತು ಸಮಾಜದ ಪ್ರತಿಯೊಬ್ಬ ಪ್ರಜೆಯ ಕರ್ತವ್ಯವಾಗಿದೆ.

ನಗರ ಹಾಗೂ ಪಟ್ಟಣ ಪ್ರದೇಶಗಳಲ್ಲಿ ಹೊಸ ಪೀಳಿಗೆಯ ಬಹುತೇಕ ಜನರಲ್ಲಿ ವೃದ್ದರು ಕುಟುಂಬಕ್ಕೆ ಬಾರ ಎನ್ನುವ ಭಾವನೆ ಬೆಳೆಯುತ್ತಿದೆ. ಅಪ್ಪ, ಅಮ್ಮ, ಅಜ್ಜ, ಅಜ್ಜಿ, ಹಾಗೂ ಅಸಹಾಯಕರಾದ ಬಂಧುಗಳನ್ನು ಮನೆಯಲ್ಲಿ ಇಟ್ಟುಕೊಟು ನೋಡಿಕೊಳ್ಳುವ ಮನಸ್ಥಿತಿಯ ಜನರು ಅಪರೂಪವಾಗುತ್ತಿದ್ದಾರೆ. ತಂದೆ ಮತ್ತು ತಾಯಿ ಮಕ್ಕಳಿಗೆ ಒಂದು ನಿರ್ದಿಷ್ಟ ಅವಧಿಯವರೆಗೆ ಅನಿವಾರ್ಯ ಮದುವೆಯಗಿ ತಮ್ಮದೇ ಆಸೆ ಕುಟುಂಬರೂಪಿಸಿಕೊಂಡು ನಂತರ ತಂದೆ ತಾಯಿಗಳ ಬಗ್ಗೆ ಅನಾದರ ಬೆಳೆಯಲು ಆರಂಭವಾಗುತ್ತದೆ. ವೃದ್ಧಾಪ್ಯ ಹಾಗೂ ಸಣ್ಣಪುಟ್ಟ ದೈಹಿಕ ನ್ಯೂನತೆಗಳು ಹಾಗೂ ರೋಗ ರುಜಿನಗಳಿಗೆ ತುತ್ತದ ಹಿರಿಯರನ್ನು ನೋಡಿಕೊಳ್ಳಲು ಹಿಂಜರಿಯುವ ಯುವಕರು ಮಹಾನಗರಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಮಕ್ಕಳಿಗೆ ನಾವು ಹೊರೆಯಾಗುವುದು ಬೇಡ ಎಂದುಕೊಂಡು ವೃದ್ದ ತಂದೆ ತಾಯಿಗಳು ಕಷ್ಟವಾದರು ಸರಿ ಪ್ರತ್ಯೇಕವಾಗಿರಲು ಬಯಸುತ್ತಾರೆ ಆರ್ಥಿಕ ಸಾಮಾರ್ಥ್ಯ ಇಲ್ಲದವರು ಮಕ್ಕಳ ಮನೆಯಲ್ಲಿಯೇ ಇರುವುದು ಅನಿವಾರ್ಯವಾಗುತ್ತದೆ. ವೃದ್ಧಾಪ್ಯದಲ್ಲಿ ಮಕ್ಕಳ ಆಶ್ರಯ ಸಿಕ್ಕರೆಸಾಕು ಎನಿಸುತ್ತದೆ ಅಂತಹ ಆಸರೆ ಕಳೆದು ಕೊಂಡ ಹಿರಿಯ ಜೀವಿಗಳಿಗೆ ಕುಟುಂಬದ ಪರಿಸರವನ್ನು ಸೃಷ್ಟಿಸುವ ಪ್ರಯತ್ನಕ್ಕೆ ಕೆಲ ಸಂಘ ಸಂಸ್ಥೆಗಳು ಮುಂದಾಗಿವೆ ಕೆಲವು ಸಂಸ್ಥೆಗಳ ಪ್ರತಿ ಪಲಾಪೇಕ್ಷೆ ಇಲ್ಲದೆ ವೃದ್ಧರ ಮನೆಗಳನ್ನು ನಿರ್ವಹಿಸುತ್ತಾರೆ. ಪ್ರಸ್ತುತ ಸಮಾಜದಲ್ಲಿ ವೃದ್ಧರು ಸಾಕಷ್ಟು ಪ್ರಮಾಣದಲ್ಲಿ ನೋಡಲಾಗುತ್ತಿದೆ. ಅದಕ್ಕೆ ಪರಿಹಾರೋಪಾಯಗಳನ್ನು ಕಂಡುಕೊಳ್ಳಲು ಸತತ ಪ್ರಯತ್ನವು ಸಹ ನಿರಂತರವಾಗಿ ನಡೆದು ಕೊಂಡು ಬರುತ್ತಿದೆ. ವೃದ್ಧರ ಸಮಸ್ಯೆಗಳಿಗೆ ಶಾಶ್ವತ ಪರಿಹಾರಗಳನ್ನು ದೊರಕಿಸಿ ಕೊಡುವಲ್ಲಿ ಸಮಾಜ, ಸರ್ಕಾರ, ಸಂಘ ಸಂಸ್ಥೆಗಳು ಸ್ವಲ್ಪ ಪ್ರಮಾಣದಲ್ಲಿ ವಿಫಲತೆಯನ್ನು ಕಾಣುತ್ತಿವೆ. ವೃದ್ಧರ ಸಮಸ್ಯೆಗಳನ್ನು ಅವಲೋಕಿಸಿದಾಗ ಮುಂದೆ ಇಂತಹ ಸಮಸ್ಯೆಗಳು ನಮಗೂ ಬರಬಹುದು ಎಂದು ಕಲ್ಪಿಸಿಕೊಳ್ಳಲಾಗಿದೆ ಪ್ರಸ್ತುತವಾಗಿ ಮೊದಲನೇ ಅಧ್ಯಾಯನದಲ್ಲಿ ವೃದ್ಧರ ಬಗ್ಗೆ ಯಾವ ಕಾರಣಕ್ಕೆ ಅಧ್ಯಾಯನ

ಮಾಡಬೇಕು ಪ್ರಸ್ತುತವಾಗಿ ಇದು ಅಧ್ಯಾಯನದ ಅವಶ್ಯಕತೆ ಇರುತ್ತದೆಯೋ, ಇಲ್ಲವೋ ಎನ್ನುವುದರ ಬಗ್ಗೆ ಅರಿವನ್ನು ಕಂಡು ಕೊಳ್ಳಲಾಗಿದೆ. ಯಾವುದೇ ಒಂದು ವಿಷಯವನ್ನು ಆಯ್ಕೆ ಮಾಡಿಕೊಳ್ಳಬೇಕಾದರೆ ಆ ವಿಷಯದ ಬಗ್ಗೆ ಪೂರ್ವ ಜ್ಞಾನದ ಅವಶ್ಯಕತೆ ಬೇಕು. ಮತ್ತು ಒಂದು ನಿರ್ಧಿಷ್ಟ ವ್ಯಾಪ್ತಿ ಹೊಂದಿರಬೇಕಾಗುತ್ತದೆ ಉದ್ದೇಶಗಳನ್ನು ಹೊಂದಿರಬೇಕಾಗುತ್ತದೆ ಕ್ಷೇತ್ರ ಕಾರ್ಯದ ಸಮಯದಲ್ಲಿ ಸಂಶೋಧಕನು ಸಮಚಿತ್ತದಿಂದ ಮತ್ತು ಸಹನೆಯಿಂದ ವರ್ತಿಸಬೇಕಾಗುವುದು. ವಿಷಯದ ಬಗ್ಗೆ ಆಳವಾದ ಅಧ್ಯಾಯನ ಮಾಡಬೇಕಾಗುತ್ತದೆ. ವೃದ್ಧರ ಬಗ್ಗೆ ಬಹಳಷ್ಟು ಅಧ್ಯಾಯನವನ್ನು ಇದುವರೆಗೆ ನಡೆದಿದೆ. ಆಧುನಿಕ ಸಮಾಜದಲ್ಲಿ ವಯೋವೃದ್ಧರ ಸ್ಥಿತಿಗತಿಗಳು ಎಂಬ ವಿಷಯದಿಂದ ಸಮಾಜದಲ್ಲಿ ಯಾವರೀತಿಯ ಪರಿಣಾಮ ಬೀರಬಹುದು ಎಂಬುವುದನ್ನು ಕಲ್ಪಿಸಿ ಕೊಳ್ಳಬೇಕಾಗುವುದು. ಮತ್ತು ಅಧ್ಯಾಯನಕ್ಕೆ ಸಂಭಂದಿಸದಂತೆ ವಿಧಿವಿಧಾನಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ.

ಎರಡನೇ ಅಧ್ಯಾಯನದಲ್ಲಿ ವೃದ್ಧರು ಎಂದರೆ ಯಾರು ಅವರು ಹೇಗಿರುತ್ತಾರೆ ಪ್ರಾಚೀನ ಕಾಲದಲ್ಲಿ ವೃದ್ಧರು ಹೇಗಿದ್ದರು ಅವರ ರಕ್ಷಣೆ ಯಾವರ ರೀತಿಯಿಂದ ಕೂಡಿತ್ತು, ವೃದ್ಧರಲ್ಲಿ ಎಷ್ಟು ಬಗೆಗಳು ಕಂಡು ಬರುತ್ತವೆ ಎಂಬುದನ್ನು ಕಲ್ಪಿಸಿಕೊಳ್ಳಲಾಗಿದೆ. ನಾನಾ ವೃದ್ಧರು ಯಾವ ರೀತಿಯ ಸಮಸ್ಯೆಗಳಿಗೆ ಸಿಲುಕಿದ್ದಾರೆ ಅವರಿಗೆ ಯಾವ ಯಾವ ಕಾಲಕ್ಕೆ ಯಾವ ಯಾವ ಯೋಜನೆಗಳನ್ನು ರೂಪಿಸಬೇಕಾಗುತ್ತದೆ ಎಂಬುವುದನ್ನು ಮನವರಿಕೆ ಮಾಡಿಕೊಳ್ಳಲಾಗಿದೆ. ಪ್ರಾಚೀನ ಕಾಲದಲ್ಲಿರುವ ವೃದ್ಧರ ಯೋಗಕ್ಷೇಮ ಮತ್ತು ಸೌಲಭ್ಯಗಳು ಯಾವರೀತಿಯಿಂದ ಕೂಡಿರುತ್ತವೆ ಮತ್ತು ಆಧುನಿಕ ಸಮಾಜದಲ್ಲಿ ಯಾವರೀತಿಯ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿದ್ದಾರೆ ಎಂಬುವುದನ್ನು ಓರೆ ಹಚ್ಚಿ ನೋಡಲಾಗಿದೆ. ಹಿಂದಿನಕಾಲದ ವೃದ್ಧಾಪ್ಯದಲ್ಲಿ ವೃದ್ಧರು ಕುಟುಂಬದೊಂದಿಗೆ ಸಮಾಜದೊಂದಿಗೆ ಯಾವ ರೀತಿಯಿಂದ ಹೊಂದಿಕೊಳ್ಳುತ್ತಿದ್ದರು ಮತ್ತು ವೃದ್ಧರ ಉಡುಗೆ, ತೊಡುಗೆ, ಆಹಾರ ಸೇವನೆ ದುಡಿಮೆ, ಆರ್ಥಿಕತೆ, ಸಾಮಾಜಿಕ ಭದ್ರತೆ, ಧಾರ್ಮಿಕವಾಗಿ ಅವರ ಸ್ಥಾನಮಾನ

ಮುಂತಾದವುಗಳನ್ನು ಅವಲೋಕನಕ್ಕೆ ಅಳವಡಿಸಲಾಗಿದೆ. ಪ್ರಸ್ತುತವಾಗಿ ವೃದ್ಧರು ಯಾರು ಇವರಿಗೆ ಆಧುನಿಕ ಸಮಾಜದಲ್ಲಿ ಸ್ಥಾನಮಾನಗಳೇನು? ಆಧುನಿಕ ಸಮಾಜದ ವೃದ್ಧರ ಜೀವನದ ಶೈಲಿ ಮತ್ತು ಹಿಂದಿನ ಕಾಲದ ವೃದ್ಧರಿಗೂ ವ್ಯತ್ಯಾಸಗಳನ್ನು ಕಂಡು ಕೊಳ್ಳಲಾಗಿದೆ. ಆಧುನಿಕರಣದಿಂದ ಬದಲಾಗುತ್ತಿರುವ ಸಮಾಜದಲ್ಲಿ ವೃದ್ಧರ ಸಂಖ್ಯೆಯು ಗಣನೀಯವಾಗಿ ಏರುತ್ತಿರುವುದರಿಂದ ಸಮಾಜದಮೇಲೆ ಆಗುವ ದುಷ್ಪರಿಣಾಮಗಳನ್ನು ಅವಲೋಕಿಸಿಲಾಗಿದೆ ಪ್ರಸ್ತುತ ವೃದ್ಧರು ಯಾವರೀತಿ ಜೀವನವನ್ನು ನಡೆಸಿಕೊಂಡು ಹೋಗುತ್ತಾರೆ ಇವರಿಗೆ ಬೇಕಾಗಿರುವ ಮೂಲಭೂತ ಸೌಕರ್ಯ ಯಾವ ಯಾವ ಅವಶ್ಯಕತೆಗಳನ್ನು ಹೊಂದಿರುತ್ತಾರೆ ಎಂಬುವುದನ್ನು ತಿಳಿದುಕೊಳ್ಳಲಾಗಿದೆ. ಸಮಾಜದಲ್ಲಿ ಇವರಿಗಿರುವ ಸ್ಥಾನಮಾನಗಳೇನು ಎಂಬುವುದನ್ನು ಪತ್ತೇ ಹಚ್ಚಲಾಗಿದೆ ಪ್ರಸ್ತುತವಾಗಿ ವೃದ್ಧರಲ್ಲಿ ಹಲವಾರು ವೃದ್ಧರನ್ನು ಕಂಡು ಹಿಡಿಯಲಾಗಿದೆ. ಇಲ್ಲಿ ಹಲವಾರು ರೀತಿಯ ವೃದ್ಧರ ಜೀವನ ಶೈಲಿಯೂ ಭಿನ್ನತೆಯಿಂದ ಕೂಡಿದೆ. ಈ ವೃದ್ಧರಿಗೆ ಬೇಕಾಗಿರುವ ಮೂಲಭೂತ ಸೌಕರ್ಯಗಳನ್ನು, ಯೋಜನೆಗಳನ್ನು ರೂಪಿಸುವುದು, ವೃದ್ಧರನ್ನು ಸಂರಕ್ಷಿಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ ವಿಧವಾ ವೃದ್ಧರ ಸಮಸ್ಯೆಗಳನ್ನು ಅವಲೋಕಿಸಲಾಗಿದೆ ಅವರು ಆರ್ಥಿಕವಾಗಿ ಸಂಕಷ್ಟಕ್ಕೆ ಸಿಲುಕಿರುವುದು ಸ್ಪಷ್ಟವಾಗಿರುತ್ತದೆ.

ವೃದ್ಧರ ಪರಿಕಲ್ಪನೆಯಲ್ಲಿ ವೃದ್ಧಾಪ್ಯಕ್ಕೆ ಕಾಲಿಡಲು ಏನು ಕಾರಣಗಳು? ವೈಯಕ್ತಿಕ ಕಾರಣಗಳು ಮತ್ತು ಸಹಜವಾದ ಕಾರಣಗಳನ್ನು ಕಂಡುಕೊಳ್ಳಲಾಗಿದೆ. ಈ ವೃದ್ಧಾಪ್ಯವು ಯಾವಾಗ ಪ್ರಾರಂಭವಾಗುತ್ತದೆ ಈ ವೃದ್ಧಾಪ್ಯವು ಆರಂಭಕ್ಕೆ ಕಾರಣವಾದ ಅಂಶಗಳನ್ನು ಗುರುತಿಸಲಾಗಿದೆ. ಈ ವೃದ್ಧಾಪ್ಯದಿಂದ ವೃದ್ಧರ ಮೇಲೆ ಎಂಥಾ ಪರಿಣಾಮ ಬೀರುತ್ತದೆ. ವೃದ್ಯಾಪವನ್ನು ಕಡಿವಾಣ ಹಾಕುವುದಕ್ಕೆ ಸಾಧ್ಯವೇ? ಅಸಾಧ್ಯವೇ? ಎನ್ನುವುದನ್ನು ಓರೆ ಹಚ್ಚಿನೋಡಲಾಗಿದೆ. ವೃದ್ಧಾಪ್ಯವು ಒಂದು ಸಹಜ ಪ್ರವೃತ್ತಿಯಾಗಿದೆ ಇದು ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲಿ ಬರುವ ಕೊನೆಯ ಘಟವಾಗಿದೆ. ಜೀವನದುದ್ದಕ್ಕೂ ದುಡಿಮೆಯಲ್ಲಿ

ನಿರತರಾದವರಿಗೆ ವಿಶ್ರಾಂತಿಯ ವಯಸ್ಸಾಗಿದೆ ಈ ವಿಶ್ರಾಂತಿಯ ವಯಸ್ಸಿನಲ್ಲಿಯೇ ಅನೇಕ ಸಮಸ್ಯೆಗಳಿಗೆ ಬಲಿಯಾಗಿರುವುದು ಗಮನಾರ್ಹವಾಗಿದೆ. ಕೆಲವೊಂದು ಕುಟುಂಬದಲ್ಲಿ ವೃದ್ಧರಿಗೆ ವೃದ್ಧಾಪ್ಯದಲ್ಲಿ ನೆಮ್ಮದಿ ಇಲ್ಲದಿರುವುದನ್ನು ಕಂಡು ಕೊಳ್ಳಲಾಗಿದೆ.

**ಮೂರನೇಯ ಅಧ್ಯಾಯದಲ್ಲಿ** ವೃದ್ಧರ ಸ್ಥಿತಿಗತಿಗಳನ್ನು ಅವಲೋಕಿಸಲಾಗಿದೆ ಪ್ರಸ್ತುತ ಸಮಾಜದಲ್ಲಿ ಮತ್ತು ಪುರಾತನ ಕಾಲದ ವಯೋವೃದ್ಧರ ಸ್ಥಿತಿಗತಿಗಳಿಗೂ ಈಗಿರುವ ವೃದ್ಧರ ಸ್ಥಿತಿಗತಿಗಳಿಗೂ ಇರುವ ಭಿನ್ನತೆಯನ್ನು ಪತ್ತೇಹಚ್ಚಲಾಗಿದೆ. ಸಮಜದಲ್ಲಿ ವೃದ್ಧರು ಯಾವ ಸಮಸ್ಯೆಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಸಿಲುಕಿದ್ದಾರೆ ಅವರು ಸಮಾಜದಲ್ಲಿ ಬಾಳವ ಅಗಹಾಗೂ ಬದುಕುವ ರೀತಿ ನೀತಿಗಳು ಯಾವ ರೀತಿಯಾಗಿವೆ ಸಮಾಜದಲ್ಲಿ ಇರುವ ವ್ಯಕ್ತಿಗಳು ವೃದ್ಧರನ್ನು ಯಾವ ದೃಷ್ಟಿಕೋನದಿಂದ ನೋಡುತ್ತಾರೆ, ವೃದ್ಧರು ಜಿಚಿಡಿಚಿಟಿಚಿ ಸಮಾಜಕ್ಕೆ ಅವಶ್ಯಕರೇ ಎನ್ನುವುದು ಮನವರಿಕೆ ಮಾಡಲಾಗಿದೆ. ಪ್ರತಿಯೊಬ್ಬ ಪ್ರಜೆಯು ವೃದ್ಧರ ಚಿಂತನೆ ಮಾಡುವುದು ಅವರನ್ನು ರಕ್ಷಿಸಿಕೊಳ್ಳುವುದು ಸಮಾಜದಲ್ಲಿ ವೃದ್ಧರ ಸ್ಥಿತಿಗತಿಯು ಯಾವರೀತಿ ಇದೆ ಧಾರ್ಮಿಕ ಸ್ಥಿತಿಗತಿಗಳು ಯಾವ ರೀತಿಯಿಂದ ಕೂಡಿದೆ ಸಾಮಾಜಿಕವಾಗಿ ಸಮಾಜದಲ್ಲಿರುವರ ಸ್ಥಾನಮಾನಗಳು ಯಾವುವು ಆರ್ಥಿಕವಾಗಿ ವೃದ್ಧರು ಪ್ರಬಲರಿರುವುದು ಎಷ್ಟೋಂದು ಪ್ರಮಾಣದಲ್ಲಿ ಸತ್ಯವಾಗಿರುತ್ತದೆ ದೈಹಿಕವಗಿ ಇವರು ಯಾವ ರೀತಿಯಿಂದ ಇರುತ್ತಾರೆ ಪ್ರಾಚೀನ ಕಾಲದಲ್ಲಿರುವ ವಯೋವೃದ್ಧರಿಗಿರುವ ಸ್ಥಾನಮಾನ ಮತ್ತು ಸ್ಥಿತಿಗತಿಗಳೇನು ಪ್ರಸ್ತುತವಾಗಿರುವ ಸಮಾಜದಲ್ಲಿರುವ ವೃದ್ಧರಗಿರುವ ಸ್ಥಾನಮಾನ ಮತ್ತು ಸ್ಥಿತಿಗತಿಗಳೇನು ಎಂಬುದನ್ನು ತಿಳಿದುಕೊಳ್ಳಲಾಗಿದೆ.

**ನಾಲ್ಕನೆ ಅದ್ಯಾಯದಲ್ಲಿ** ವೃದ್ದರ ಸಮಸ್ಯೆಗಳಿಗೆ ಕಾರಣಗಳನ್ನು ಪತ್ತೆ ಹಚ್ಚಲಾಗಿದೆ. ವ್ಯಕ್ತಿಯು ಹುಟ್ಟುವಾಗಲೇ ಸಮಸ್ಯೆಗಳ ಸರಮಾಲೆಯನ್ನು ಕೊರಳಲ್ಲಿ ಹಾಕಿಕೊಂಡೇ ಹುಟ್ಟುತ್ತಾನೆ. ಅವನವನ ವಯಸ್ಸಿಗನುಗುಣವಾಗಿ ಸಮಸ್ಯೆಗಳನ್ನು ಎದುರಿಸುತ್ತಾ ಮತ್ತು

ಸಮಸ್ಯೆಗಳಿಗೆ ಪರಿಹಾರವನು ಕಂಡುಕೊಳ್ಳುತ್ತಾರೆ. ಮತ್ತು ಪ್ರಯತ್ನಮಾಡುತ್ತ ಜೀವನವನ್ನು ಸಾಗಿಸುತ್ತಾನೆ. ಆದರೆ ಕೆಲವೊಂದು ಸಮಸ್ಯೆಗಳಿಗೆ ಕಾರಣಗಳು ಕಾಣದೇ ಅದೇ ಸಮಸ್ಯೆಯಲ್ಲಿ ಅಂತ್ಯಕಾಣುತ್ತಾನೆ. ಪ್ರಸ್ತುತ ಸಮಾಜದಲ್ಲಿ ವೃದ್ದರ ಸಮಸ್ಯೆಗಳು ಪ್ರತಿ ನಿಮಿಷ, ಪ್ರತಿ ಕ್ಷಣಕ್ಕೆ ಏರುತ್ತಲೇ ಬಂದಿರುತ್ತವೆ. ಸಂಘ ಸಂಸ್ಥೆಗಳು,ಸರಕಾರಗಳು ಸಮಾಜದಲ್ಲಿರುವ ವ್ಯಕ್ತಿಗಳ ಸಮಸ್ಯೆಗಳಿಗೆ ಕಡಿವಾಣ ಹಾಕಲು ಪ್ರಯತ್ನಿಸುತ್ತಿದ್ದರು. ಕೆಲವೊಂದು ಸಮಸ್ಯೆಗಳು ಶಾಸ್ವತ ಪರಿಹಾರ ಕಂಡುಕೊಳ್ಳುವಲ್ಲಿ ಯಶಸ್ವಿಕಂಡುಕೊಂಡಿದ್ದಾರೆ. ಇನ್ನೂ ಕೆಲವೊಂದು ಸಮಸ್ಯಗಳಿಗೆ ಪರಿಹಾರ ಹುಡುಕಾಟದಲ್ಲಿ ತೊಡಗಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಪ್ರತ್ಯೇಕವಾಗಿ ಕ್ಷೇತ್ರಕಾರ್ಯದಲ್ಲಿ ಮತ್ತು ಸಂದರ್ಶನದಲ್ಲಿ ವೃದ್ದರ ಜೀವನ ನಡೆಸುವ ವಿಧಿವಿಧಾನಗಳು, ಸ್ಥಿತಿಗತಿಗಳನ್ನು, ಸಮಸ್ಯೆಗಳನ್ನು ಪರಿಹಾರೋಪಾಯಗಳನ್ನು ಪರಿಹರಿಸುವುದಕ್ಕೆ ನನ್ನ ಪ್ರಬಂದವು ಸಹಕಾರಿಯಾಗಬಹುದು ಎಂದು ಕಲ್ಪಿಸಿಕೊಳ್ಳಲಾಗಿದೆ. ಈಗಾಗಲೇ ವೃದ್ಧರ ಕುರಿತು ಸಾಕಷ್ಟು ಅಧ್ಯಾಯನಗಳು ನಡೆದಿರುತ್ತವೆ. ಆದರೆ ಯಾದಗಿರಿ ತಾಲ್ಲೂಕ ವಯೋವೃದ್ಧರು ಕುರಿತು ಅಧ್ಯಾಯನ ನಡೆದಿರುವುದಿಲ್ಲ. ಪ್ರಸ್ತುತವಾಗಿ ಯಾದಗಿರಿ ತಾಲ್ಲೂಕಿನಲ್ಲಿ ವೃದ್ಧರ ಸ್ಥಿತಿಗತಿಗಳೂ ಗಂಭೀರ ಸ್ವರೂಪಗಳಾಗಿದ್ದು ಅದಕ್ಕಾಗಿ ಯಾದಗಿರಿ ತಾಲ್ಲೂಕಿನ ವಯೋವೃದ್ಧರ ಸ್ಥಿತಿಗತಿಗಳನ್ನು ತಮ್ಮ ಮುಂದಿಡಲು ಇಚ್ಛೆಸುತ್ತೇನೆ.

**"ನಿಮ್ಮ ಕುಟುಂಬದಲ್ಲಿನ ವೃದ್ಧರನ್ನು ಅವರ ವಯಸ್ಸಿಗನುಗುಣವಾಗಿ ಗೌರವಿಸಿ ಮತ್ತು ಅದೇ ಗೌರವವನ್ನು ಇತರೆ ಕುಟುಂಬದ ಸದಸ್ಯರಿಗಳಿಗೂ ವಿಸ್ತರಿಸಿ"**

**ಎನ್ನುವ ಮಾತು ಡಾ. ಎಚ್. ಡಿ. ಪ್ರಶಾಂತ ಇವರ ಮಾತು ಸಮಂಜಸವಾಗಿದೆ.**

## ಸಂದರ್ಶನ – 01

| | | |
|---|---|---|
| ಹೆಸರು | : | ನಿಂಗಪ್ಪ ತಂದೆ ಮಲ್ಲಪ್ಪ (ಕೊಟ್ರಕಿ) ಗಂಜಕಕೋಟೆ |
| ಜನ್ಮ | : | 1944 |
| ವಯಸ್ಸು | : | 66 |
| ಊರು | : | ಗಾಜರಕೋಟ (ಕೋಟ್ರಕಿ) |
| ಪ್ರಸ್ತುತ ವಾಸ | : | ಯಾದಗಿರಿ |
| ಹೆಂಡತಿ | : | ಹುಸೇನಮ್ಮ. |
| ಶಿಕ್ಷಣ | : | ಹತ್ತನೇಯ (ಅನುತ್ತೀರ್ಣ) |
| ಹಿಂದಿನ ವೃತ್ತಿ | : | 1990ರಲ್ಲಿ ಖಾಯಂಯಾಗಿ P.W.D.M.I.sub division 12 ವರ್ಷ 9 ತಿಂಗಳು ಸೇವೆ 2002 ರಲ್ಲಿ ಸೇವೆಯಿಂದ ನಿವೃತ್ತಿ ನಿವೃತ್ತಿ ವೇತನ : 2100 |
| ಪ್ರಸ್ತುತ ವೃತ್ತಿ | : | ಶ್ರೀನಿವಾಸ್ ಮಧ್ಯದಂಗಡಿಯಲ್ಲಿ ದಿನಗೂಲಿ ಸೇವಕ–ವೇತನ 1200 |

| | | |
|---|---|---|
| ಸರಕಾರಿ ನಿವೃತ್ತಿ ವೇತನ | – | 2100 |
| ದಿನಗೂಲಿ ವೇತನ | – | 1200 |
| | | 3300/– ರೂ. |

ದಿನಾಂಕ 09.07.09 ರಂದು ವಯೋವೃದ್ಧರಾದ ಶ್ರೀನಿಂಗಪ್ಪ ತಂದೆ ಮಲ್ಲಪ್ಪನವರ ಮನೆಗೆ ಸಂದರ್ಶನಕ್ಕೆ ಭೇಟಿಮಾಡಿದ ಸಂದರ್ಭದಲ್ಲಿ ಶ್ರೀ ನಿಂಗಪ್ಪನವರು ನೀಡಿದ ವಿವರವನ್ನು ಮತ್ತು ಅವರು ನೀಡಿದ ಮಾಹಿತಿಯನ್ನು ವಿವರಿಸಲಾಗಿದೆ. ನಿಂಗಪ್ಪನವರು ಮೂಲತಃ ಗಾಜರಕೋಟ ಗ್ರಾಮದವರು ಇದು ಯಾದಗಿರಿಯಿಂದ 35 ಕಿ.ಮೀ ಅಂತರದಲ್ಲಿದೆ. ಇವರು ಒಂದನೆ ತರಗತಿಯಿಂದ 4ನೇ ತರಗತಿಯವರೆಗೆ ಗಾಜರಕೋಟದಲ್ಲಿ ಶಿಕ್ಷಣ ಪಡೆದುಕೊಂಡು ಐದನೆಯ ತರಗತಿಯ ವ್ಯಾಸಂಗಕ್ಕೆ ಯಾದಗಿರಿಗೆ ಬಂದು ಸರಕಾರಿ ಪ್ರೌಢಶಾಲೆಯಲ್ಲಿ ಹತ್ತನೆ ತರಗತಿಯವರೆಗೆ ಶಿಕ್ಷಣಪಡೆದು ಹತ್ತನೇಯ ತರಗತಿಯಲ್ಲಿ ಅನುತ್ತೀರ್ಣರಾಗಿ ಮರಳಿಗಾಜರಕೋಟಿಗೆ ಪ್ರಯಾಣಬೆಳಸಿ (1966–65 ನೇಸಾಲಿನಲ್ಲಿ) ತಮ್ಮ 25ನೇ ವಯಸ್ಸಿನಲ್ಲಿ ಹುಸೇನಮ್ಮ ಅವರೊಂದಿಗೆ ವಿವಾಹವಾದನು. ಈಗ ಇವರು 4 ಹೆಣ್ಣು ಮತ್ತು 2 ಗಂಡು ಮಕ್ಕಳಿಗೆ ಜನ್ಮ ಕೊಟ್ಟು ಸಂಸಾರದ ಸಕಲ ಸುಖ ದುಃಖ ನೋವು ನಲಿವುಗಳನ್ನು ಎದುರಿಸುತ್ತಾ ಕಷ್ಟ ಸುಖಗಳನ್ನು ಸಮವಾಗಿ ಮತ್ತು ಸವಲಾಗಿ ಸ್ವೀಕರಿಸಿ ತಮ್ಮ ಜೀವನದುದ್ದಕ್ಕೂ ಸಂಸಾರದ ಬಂಡಿಯನ್ನು ಎಳೆದುಕೊಂಡು ತಮ್ಮ 66ನೇ ವಯಸ್ಸಿನವರೆಗೆ ತಂದಿದ್ದಾರೆ. ಇವರು ಉದ್ಯೋಗವನ್ನರಿಸಿ ಕುಟುಂಬ ಸಮೇತವಾಗಿ ಯಾದಗಿರಿಗೆ ಬಂದು ನೆಲೆಸಿದ್ದು ಯೌವ್ವನದ ವಯಸ್ಸಿನಲ್ಲಿ ಎಲ್ಲಾಕಷ್ಟಗಳನ್ನು ಸುಖಗಳನ್ನು ಅನುಭವಿಸಿ ನಿರಂತರವಾಗಿ ಸಂಸಾರವನ್ನೆ ನಡೆಸಿದ್ದಾರೆ. ಬರಗಾಲದಿಂದ ತತ್ತರಿಸಿದ ಕಾಲದಲ್ಲಿ ಜೀವನ ನಿರ್ವಹಣೆ ತುಂಬಾಕಷ್ಟಕರವಾಗಿದ್ದುದು ಅಂತಹ ಕಾಲದಲ್ಲಿ ಸ್ವಾಭಿಮಾನಿಯಗಿ ಸ್ವಾವಲಂಬನೆ ಜೀವನವನ್ನು ಸಾಗಿಸಿಕೊಂಡು ಬಂದಿದ್ದಾರೆ. ಸಮಾಜದಲ್ಲಿ ಒಬ್ಬ ಒಳ್ಳೆಯ ವ್ಯಕ್ತಿ ಎಂದೆನಿಸಿಕೊಂಡಿದ್ದಾರೆ, ಇವರು ಇಂದಿನ ಆಧುನಿಕ ಜೀವನದ ಶೈಲಿಯನ್ನು ತಿರಸ್ಕರಿಸುತ್ತಾರೆ. ಪ್ರತಿದಿನ ಹೊಡೆದಾಟ, ಸ್ವಾರ್ಥಮನೊಭಾವನೆ, ಮೋಸ, ವಂಚನೆಗಳಂತಹ ಕೃತ್ಯಗಳನ್ನು ಕಂಡು ಬೇಸರ ವ್ಯಕ್ತ ಪಡಿಸುತ್ತಾರೆ. ಹಿಂದಿನ ಕಾಲದ ಜೀವನದ ರೀತಿ ನೀತಿಗಳನ್ನು ರೂಢಿ ಪದ್ಧತಿಗಳನ್ನು ಬಯಸುತ್ತಾರೆ. ಇವರು 66 ವಯಸ್ಸಾದರೂ ಇನ್ನು ಸಂಸಾರವನ್ನು ಹೆಗಲೇರಿಸಿಕೊಂಡು ಜೀವನವನ್ನು ಸಾಗಿಸುತ್ತಿದ್ದಾರೆ ಸದಾ ಮಕ್ಕಳ ಚಿಂತೆ ಮಕ್ಕಳ ಭವಿಷ್ಯ ರೂಪಿಸುವ ಯೋಚನೆಯಲ್ಲಿ ಮಗ್ನರಾಗಿದ್ದಾರೆ. ಇವರು ಯಾವುದೇ ಆಸ್ತಿ ಹೊಂದಿರದೆ

ಕೇವಲ ಅಲ್ಪ ಪ್ರಮಾಣದ ಪಿಂಚಣಿಯಲ್ಲಿ ಕುಟುಂಬವನ್ನು ನಗರ ಪ್ರದೇಶದಲ್ಲಿ ಸಾಗಿಸುವುದು ಕಷ್ಟ ಎಂದು ತಿಳಿದುಕೊಂಡು ತಮ್ಮ ವೃದ್ಧಾಪ್ಯದಲ್ಲಿ ಇಂದೂ ವೈನ್ ಶಾಪ್ (ಮದ್ಯದಂಗಡಿ) ಯಲ್ಲಿ ಸೇವಕರಾಗಿ ಕಾರ್ಯ ನಿರ್ವಹಿಸುತ್ತಿದ್ದು ತಮ್ಮ ಮುಪ್ಪಿನ ಜೀವನದಲ್ಲಿ ಪಡೆಯ ಬೇಕಾಗಿದ್ದ, ನೆಮ್ಮದಿ, ಶಾಂತಿ, ಮಕ್ಕಳ, ಮೊಮ್ಮಕ್ಕಳ ಪ್ರೀತಿ, ವಾತ್ಸಲ್ಯಗಳನ್ನು ಪಡೆಯದೆ ಕುಡಿತದ ಅಮಲಿನಲ್ಲಿರುವ ಪೋಲಿ ಹುಡುಗರ ಬೈಗಳು, ನಿಂದನೆ, ಅಶ್ಲೀಲ ಮಾತುಗಳನ್ನು ಕೇಳಿ ಮನ ನೊಂದಿದ್ದಾರೆ. ಎಲ್ಲಾನಗರ ಪ್ರದೇಶಗಳಲ್ಲಿ ಪ್ರತಿದಿನಕ್ಕೆ ಮಧ್ಯದಂಗಡಿಗಳು ಪ್ರಾರಂಭಗೊಳ್ಳುತ್ತಲೇ ಇವೆ ಇಂತಹ ಮಧ್ಯದಂಗಡಿಯಲ್ಲಿ ಬಾಲಕರು, ಮತ್ತು ವೃದ್ಧರು ಅಲ್ಪ ಸಂಭಾವನೆಗಾಗಿ ಸೇವಕರಾಗಿ ಕೆಲಸ ಮಾಡುತ್ತಿದ್ದಾರೆ. ಮಧ್ಯದಂಗಡಿಗೆ ಬರು ಮದ್ಯವ್ಯಸನಿಗಳು ವೃದ್ಧರಿಗಾಗಿರುವ ವಯಸ್ಸನ್ನು ಗಣನೆಗೆ ತೆಗೆದುಕೊಳ್ಳದೆ ಅಶ್ಲೀಲ ಮಾತುಗಳಿಂದ ನಿಂದನೆ ಮಾಡುತ್ತಾರೆ. ಇಂತಹ ಅಶ್ಲೀಲ ಮಾತುಗಳನ್ನು ಕೇಳಿ ಮನದಲ್ಲಿ ಸಾವನ್ನು ಬಯಸುತ್ತಾರೆ ಅಥವಾ ಮಾನಸಿಕವಾಗಿ ಕುಗ್ಗುತ್ತಾರೆ ತಮ್ಮ ಜೀವನದಲ್ಲಿ ಸ್ವಾವಲಂಬನೆಯಿಂದ ಸ್ವಾಭಿಮಾನದ ಬದುಕು ಬಾಳಿದ ವ್ಯಕ್ತಿ ಇಂದೂ ಮಧ್ಯವ್ಯಸನಿಗಳ ಮಾತುಗಳಿಂದ ತಮ್ಮಗೆ ಇಂತಹ ಒಂದು ಜೀವನ ಬೇಕೆ? ಇಂತಹ ಒಂದು ಬಾಳು ನಮ್ಮಗೆ ಬೇಕೆ? ಎಂದು ಯೋಚಿಸಿ ಮಾನಸಿಕವಾಗಿ ಅಸ್ವುವಸ್ಥವಾಗಿ ದೈಹಿಕ ಸಾಮರ್ಥ್ಯವನ್ನು ಕುಗ್ಗಿಸಿಕೊಳ್ಳುತ್ತಾನೆ. ಆದರೆ ಇದು ಅನಿವಾರ್ಯ. ಬದುಕ ಬೇಕಾದರೆ ಜೀವನವನ್ನು ಸಾಗಿಸಬೇಕಾದರೆ ಎಲ್ಲವನ್ನು ಸಹಿಸಿಕೊಂಡು ಬರುವುದು ಅನಿವಾರ್ಯದ ಮಾತು ಇಂತಹ ವಯೋವೃದ್ಧರು ತಮ್ಮ ಜೀವನ ನಿರ್ವಹಣೆಗೆ ನಾನಾರೀತಿಯ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಾರೆ ಅಂತಹ ವಯೋವೃದ್ಧರನ್ನು ಗುರುತಿಸಿ ಅವರಿಗೆ ಸಾಂತ್ವಾನ ಹೇಳಿ ಧೈರ್ಯ ತುಂಬಿ, ಆರೈಕೆ ಮತ್ತು ಪ್ರೋತ್ಸಾಹದ ಅವಶ್ಯಕತೆ ಇರುತ್ತದೆ. ಸಂಘ ಸಂಸ್ಥೆಗಳು ಮತ್ತು ಸರಕಾರ ಇಂತಹ ಮಧ್ಯದಂಗಡಿಯಲ್ಲಿ ಕಾರ್ಯನಿರ್ವಹಿಸುವ ವಯೋವೃದ್ದರನ್ನು ಗುರುತಿಸಿ ಅವರುಗಳಿಗೆ ಸ್ವಾವಲಂಬನೆ ಜೀವನ ಸಾಗಿಸುವುದಕ್ಕೆ ಮತ್ತು ಅವರಿಗಾಗಿ ಪ್ರತ್ಯೇಕವಾಗಿ ಕೆಲವೊಂದು ಯೋಜನೆಗಳನ್ನು ರೂಪಿಸುವುದು ಅಗತ್ಯ.

**ಆರ್ಥಿಕ ನೆರವು ನೀಡುವುದು ಸೂಕ್ತ ವಿಷಯವಾಗಿದೆ.**

1) ವೃದ್ಧಾಪ್ಯ ವೇತನ ಹೆಚ್ಚಳ ಮಾಡುವುದು.

2) ಮಧ್ಯದಂಗಡಿಯಲ್ಲಿ ಕೆಲಸವನ್ನು ನಿರ್ವಹಿಸದಂತೆ ತಡೆಹಿಡಿಯುವುದು.

3) ಮಧ್ಯದಂಗಡಿಯಲ್ಲಿ ಸೇವಕರೆಂದು ಕೆಲಸಕ್ಕೆ ತೆಗೆದುಕೊಳ್ಳುವ ಮಧ್ಯದಂಗಡಿ ಮಾಲೀಕರ ಮೇಲೆ ಕಾನೂನು ಕ್ರಮ ಜರುಗಿಸುವುದು.

4) ಸಂಘ ಸಂಸ್ಥೆಗಳಿಂದು ಸರಕಾರದಿಂದ ಆರ್ಥಿಕ ಸಹಾಯ.

5) ವಯೋವೃದ್ಧರಿಗಾಗಿ ಪ್ರತ್ಯೇಕ ತರಬೇತಿ.

6) ಸ್ವಾಲಂಬನೆ ಮತ್ತು ಸ್ವಾಭಿಮಾನದ ಜೀವನ ಸಾಗಿಸುವುದಕ್ಕೆ ಪ್ರೋತ್ಸಾಹ.

## ಸಂದರ್ಶನ – 2

ಹೆಸರು : ರತ್ನ ಬಾಸ್ಕರ್

ವಯಸ್ಸು : 62

ಗಂಡ : ದಿವಾಂಗತ ರಾಜ ರತ್ನಂ

ಊರು : ಭೀಮನಹಳ್ಳಿ

ಪ್ರಸ್ತುತ ವಾಸ : ಯಾದಗಿರಿ

ವೃತ್ತಿ : ನಿವೃತ್ತ ಶಿಕ್ಷಕಿ

ಶಿಕ್ಷಣ : ಎಸ್.ಎಸ್.ಎಲ್.ಸಿ, ಟಿ.ಸಿ.ಎಚ್, ಸಿ. ಪೆಡ್.

ಮಕ್ಕಳು : ನಾಲ್ಕು ಹೆಣ್ಣು

ದಿನಾಂಕ 11–07–2009ರಂದು ಶ್ರೀಯುತರ ಮನೆಗೆ ಸಂದರ್ಶನಕ್ಕೆ ಭೇಟಿ ನೀಡಿದಾಗ ಶ್ರೀಯುತ ರತ್ನ ಬಾಸ್ಕರ್ ಇವರು ಜೀವನದಲ್ಲಿನ ನೋವು ನಲಿವುಗಳನ್ನು ಏಳು ಬೀಳುಗಳನ್ನು ನಮ್ಮ ಮುಂದೆ ಬಿಚ್ಚಿಟ್ಟಿದ್ದಾರೆ ಇವರು 1948ರಲ್ಲಿ ಜನ್ಮ ತಾಳಿ ಜೀವನದುದ್ದಕ್ಕೂ ದುಡಿಮೆಯನ್ನು ಮೈಗೂಡಿಸಿಕೊಂಡವರು. ಇವರು 1969ರಲ್ಲಿ ಮುದ್ನಾಳ್ ರಾಚಣ್ಣಗೌಢ ಮೇಮೋರಿಯಲ್ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕಿ ವೃತ್ತಿಗೆ ನೇಮಕಾತಿ ಹೊಂದಿ 37 ವರ್ಷಗಳು ಶಿಕ್ಷಕ ವೃತ್ತಿಯಲ್ಲಿ ಸೇವೆ ಸಲ್ಲಿಸಿ ನಿವೃತ್ತಿಯಾಗಿದ್ದಾರೆ. ಇವರಿಂದ ಶಿಕ್ಷಣ ಪಡೆದ ಅನೇಕ ಬಡ ವಿದ್ಯಾರ್ಥಿಗಳು ಉನ್ನತ ಉದ್ದೆಯಲ್ಲಿ ಪ್ರಸ್ತುತವಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಮತ್ತು ಅನೇಕ ಬಡ ವಿದ್ಯಾರ್ಥಿಗಳ ಭವಿಷ್ಯದ ಬಾಳಿಗೆ ಬೆಳಕಾಗಿದ್ದಾರೆ 15/05/1972 ರಲ್ಲಿ ಸಂಸಾರ ಎಂಬ ಸಾಗರದಲ್ಲಿ ದುಮುಕ್ಕಿದ್ದಾರೆ. ಬರಗಾಲದಂತಹ ಭೀಕರ ಪರಿಸ್ಥಿತಿಯಲ್ಲಿ ಜೀವನವನ್ನು ಒಂದು ಸವಾಲಾಗಿ ಸ್ವೀಕರಿಸಿದ್ದಾರೆ ತಮ್ಮ ಸಂಸಾರ ಜೀವನದಲ್ಲಿ ಪಡೆಯಬೇಕಾಗಿದ್ದ ಎಲ್ಲಾ ಕಷ್ಟ ಸುಖ ನೋವು ನಲಿವುಗಳನ್ನು ಎದುರುಸಿದ್ದಾರೆ. ತಮ್ಮ ಸಂಸಾರ ಜೀವನದಲ್ಲಿ ನಾಲ್ಕು ಜನ ಹೆಣ್ಣು ಮಕ್ಕಳಿಗೆ ಜನ್ಮ ನೀಡಿದ್ದಾರೆ, ಜೀವನವನ್ನು ಮಾಡಿಕೊಟ್ಟಿದ್ದಾರೆ ಆದರೆ ಇವರಿಗೆ ನೋವಿನ ಸಂಗತಿಯೆಂದರೆ ಗಂಡು ಮಕ್ಕಳ ಇಲ್ಲದಿರುವುದು ಒಂದು ಕೊರಗಾಗಿದೆ. 16 ವರ್ಷಗಳಿಂದ ಪತಿಯ ಅಗಲಿಕೆಯಿಂದ ಜೀವನದಲ್ಲಿ ಜಿಗುಪ್ಸೆಗೊಂಡಿದ್ದಾರೆ ಇಷ್ಟಾದರು ಸಂಸಾರವನ್ನು ಹೆಗಲಿಗೇರಿಸಿಕೊಂಡು ನಾಲ್ಕು ಹೆಣ್ಣು ಮಕ್ಕಳ ವಿವಾಹ ಮಾಡಿದ್ದಾರೆ. ಪ್ರಸ್ತುತ ಸಮಾಜದಲ್ಲಿ ಒಬ್ಬ ಮಹಿಳೆ ಇಂತಹ ಒಂದು ಕಷ್ಟಕರ ಕಾರ್ಯಗಳನ್ನು ನಿರ್ವಹಿಸುವಳೇ ಎನ್ನುವ ಪ್ರಶ್ನೆ ಕಾಡುತ್ತಿದೆ. ಇವರಿಗೆ ಸದಾ ಕಾಡುವುದು ಒಂದೇ ಚಿಂತೆ ಪುತ್ರ ಭಾಗ್ಯವಿಲ್ಲದಿರುವುದು ಹೆಣ್ಣಮಕ್ಕಳು ಮದುವೆ ಮಾಡಿಕೊಂಡು ತಮ್ಮ ತಮ್ಮ ಪತಿಯೊಂದಿಗೆ ಮಕ್ಕಳ ಸಮೇತ ಜೀವನವನ್ನು ಮುಂದುವರೆಸಿದ್ದಾರೆ. ಶ್ರೀಯುತರು ರತ್ನ ಬಾಸ್ಕರವರು ಮುಪ್ಪಿನ ವಯಸ್ಸಿನಲ್ಲಿ ತಾನು ಒಂಟಿ ಎಂಬ ಭಾವನೆ ಮೂಡಿರುತ್ತದೆ. ಇಂತಹ ಅನೇಕ ವಯೋವೃದ್ಧರು ಇಂತಹ ಪರಿಸ್ಥಿತಿಗೆ ಸಿಲುಕಿ ತಮ್ಮ ಮುಪ್ಪಿನ ಜೀವನವನ್ನು ನೋವಿನಿಂದ ಕಳೆಯುವಂತಹ ಪರಿಸ್ಥಿತಿ ಬಂದಿರುತ್ತದೆ. ಇಂತಹವರಿಗೆ ಮಾನಸಿಕ ನೆಮ್ಮದಿಗಾಗಿ ವೃದ್ಧಾಶ್ರಮಗಳನ್ನು ಸ್ಥಾಪಿಸಬೇಕು ಮತ್ತು ಇವರ ಮಾನಸಿಕ ನೆಮ್ಮದಿ ಇಲ್ಲದಿರುವುದರಿಂದ ದೈಹಿಕ ಸಮಾರ್ಥ್ಯ ಕುಗ್ಗುವಿಕೆಗೆ ಒಂದು ಕಾರಣವಾಗಿದೆ ಇವರು ಆರ್ಥಿಕವಾಗಿ ಪ್ರಭಲವಾಗಿದ್ದರು ಸಮಾಜಿಕವಾಗಿ ಭದ್ರತೆ ಇಲ್ಲದಿರುವುದು ಕಂಡು ಬರುತ್ತದೆ. ಇವರು ಸದಾ ಒಂದಲ್ಲ ಒಂದು ರೀತಿಯ ಚಿಂತೆಯಲ್ಲಿ ಮಗ್ನರಾಗಿರುತ್ತಾರೆ ಇವರಿಗೆ ತಾನು ಪರವಾಲಂಬಿ ಎಂಬುವುದು ಮನಸ್ಸಿನಲ್ಲಿ ಮನೆ ಮಾಡಿರುತ್ತದೆ. ಇಂತಹ ವಯೋವೃದ್ಧರು ಪ್ರಸ್ತುತ ಸಮಾಜದಲ್ಲಿ ಹೇರಳ ಪ್ರಮಾಣದಲ್ಲಿ ಕಂಡು ಬರುತ್ತಾರೆ ಇಂತವರಿಗೆ ಸಮಾಜಿಕ ಭದ್ರತೆ ಕಲ್ಪಿಸಿಕೊಡುವುದು ಮತ್ತು ಪರವಾಲಂಬಿ ಎನ್ನುವ ಮಾತನ್ನು ಮರೆಮಾಚುವುದು ತಾನು ಒಂಟಿ ಎನ್ನುವುದನ್ನು ಹೋಗಲಾಡಿಸುವುದು ಅಗತ್ಯವಾಗಿದೆ.

---

ಇಂತಹ ವಯೋವೃದ್ಧರ ಮಾನಸಿಕ ನೆಮ್ಮದಿಗಾಗಿ ಕೆಲವೊಂದು ಕಾರ್ಯಕ್ರಮಗಳು

1. ವಿಚಾರ ವೇದಿಕೆಗಳ ಕಾರ್ಯಕ್ರಮಗಳು
2. ಪುರಾಣ ಪುಣ್ಯ ಕಥೆಗಳನ್ನು ಹೇಳುವುದು
3. ಮನೋರಂಜನ ಕಾರ್ಯಕ್ರಮಗಳು

ಅ) ಸಂಸಾರಿಕ ಚಲನ ಚಿತ್ರಗಳ ಪ್ರಸಾರ

ಆ) ಕಥೆ, ಕಾದಂಬರಿಗಳನ್ನು ಒದಗಿಸುವುದು

---

## ಸಂದರ್ಶನ – 3

ಹೆಸರು : ಬನ್ನೆಪ್ಪ ತಂದೆ ಚೆನ್ನಪ್ಪ

ವಯಸ್ಸು : 65 ವರ್ಷ

ಊರು : ಮೂಲತಃ ಸುರುಪುರು ತಾಲ್ಲುಕಿನ ಅಗ್ನಿ ಎಂಬ ಹಳ್ಳಿ

ಹೆಂಡತಿ : ಹೊನ್ನಮ್ಮ

ಮಕ್ಕಳು : 2 ಗಂಡು = 1 ಹೆಣ್ಣು = 2+3 = 5

ಪ್ರಸ್ತುತ ವಾಸ : ಯಾದಗಿರಿ ತಾಲ್ಲೂಕಿನ ಮೈಲಾಪೂರ ದೇವಸ್ಥಾನದಲ್ಲಿ

ಇವರು 2001 ರಿಂದ ಸುರಪುರು ತಲ್ಲೂಕಿನ ತಿಂಥಿಣಿ ಮೌನೇಶ್ವರ ದೇವಸ್ಥಾನದಲ್ಲಿ ಸನ್ಯಾಸ ದೀಕ್ಷೆ ಸ್ವೀಕಾರ ಮಾಡಿ ತಮ್ಮ ಸಮಾಜದ ಕಲ್ಯಾಣದ ಉಪದೇಶವನ್ನು ಮಾಡುತ್ತಾ 2004ರಿಂದ ಯಾದಗಿರಿ ತಾಲ್ಲೂಕಿನ ಮೈಲಾಪೂರ ದೇವಸ್ಥಾನದಲ್ಲಿ ವಾಸ ಮಾಡುತ್ತಿದ್ದಾರೆ. ಇವರು ದಿನಾಂಕ 04–07–2009 ರಂದು ರಾತ್ರಿ ಹೊತ್ತಿನಲ್ಲಿ 10:30ಕ್ಕೆ ಯಾದಗಿರಿ ನಗರದ ರೈಲ್ವೇ ನಿಲ್ದಾಣದಲ್ಲಿ ಇನ್ನಿತರ ವಯೋವೃದ್ಧರ ಜೊತೆಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ರಾತ್ರಿ ಗಸ್ತು ಪಾಳೆಯ ಕರ್ತವ್ಯ ಮೇಲಿದ್ದ ಆರ್.ಪಿ.ಐ ಪೇದೆಗಳು ಮತ್ತು ಮೇಲಾಧಿಕಾರಿಗಳು ಈ ವಯೋವೃದ್ಧರಿಗೆ ರೈಲ್ವೇ ನಿಲ್ದಾಣದಲ್ಲಿ ವಿಶ್ರಾಂತಿ ಪಡೆಯಲು ನಿರಾಕರಿಸಿದ್ದಾರೆ. ವಯೋವೃದ್ಧರು ಮತ್ತು ಪೇದೆಗಳು ನಡುವೆ ಮಾತಿನ ಚಕಮುಕಿ ನಡೆದಿದ್ದು ಅಧಿಕಾರದ ಅಮಲಿನಲ್ಲಿದ್ದ ಅಧಿಕಾರಿಗಳು ಅಧಿಕಾರದ ದುರುಪಯೋಗ ಪಡಿಸಿಕೊಂಡು ಮಾನವಿಯತೆ

ಮೌಲ್ಯಗಳನ್ನು ಮರೆತು ಕರ್ತವ್ಯದ ಮೇಲಿದ್ದ ಅಧಿಕಾರಿಗಳು ಮತ್ತು ಪೇದೆಗಳು ಶ್ರೀಯುತರನ್ನು ರೈಲ್ವೇ ನಿಲ್ದಾಣದಿಂದ ಹೊರಕ್ಕೆ ಧೂಕಿರುತ್ತಾರೆ. ಈ ದುರಂತದಲ್ಲಿ ಶ್ರೀಯುತರು ನಾಲ್ಕು ಮೆಟ್ಟಿಲುಗಳ ಮೇಲಿಂದ ಬಿದ್ದ ರಭಸಕ್ಕೆ ಒಂದು ಕೈಯಿಯ ಮೂಳೆ ಮುರಿದಿರುತ್ತದೆ ಮೊದಲೆ ಹೆಂಡತಿ ಮಕ್ಕಳ ಪ್ರೀತಿ ವಾತ್ಸಲ್ಯದಿಂದ ವಂಚಿತರಾಗಿ ಮನಶಾಂತಿಗಾಗಿ ಸನ್ಯಾಸಿ ಧೀಕ್ಷೆ ಸ್ವೀಕರಿಸಿದ ವಯೋವೃದ್ಧನಿಗೆ ಮನಶಾಂತಿಗೆ ಮತ್ತು ವಿಶ್ರಾಂತಿಗೂ ಈ ಸಮಾಜದಲ್ಲಿ ರಕ್ಷಣೆ ಇಲ್ಲದಂತಾಗಿರುವುದು ಶೋಚನೀಯ ವಿಷಯವಾಗಿದೆ. ಇಂತಹ ಘಟನೆಗಳು ಪ್ರತಿಯೊಂದು ನಗರ ಪ್ರದೇಶಗಳಲ್ಲಿ ಮತ್ತು ಪ್ರತಿಯೊಂದು ಸಮಾಜದಲ್ಲಿ ದಿನನಿತ್ಯ ನಿರಂತರವಾಗಿ ನಡೆಯುತ್ತಲೆ ಇವೆ. ವಯೋವೃದ್ಧರಿಗೆ ಪ್ರತ್ಯೇಕವಾಗಿ ರಾತ್ರಿಯ ವೇಳೆಯಲ್ಲಿ ವಿಶ್ರಾಂತಿ ಗೃಹಗಳು ಇಲ್ಲದಿರುವುದು ಸತ್ಯ ಸಂಗತಿಯಾಗಿದೆ. ಇಂತಹ ಘಟನೆಗಳು ಹೆಚ್ಚಾಗಿ ರಾತ್ರಿಯ ವೇಳೆಯಲ್ಲೇ ಬಸ್ ನಿಲ್ದಾಣ, ರೈಲ್ವೇ ನಿಲ್ದಾಣ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಜರುಗುತ್ತಲೇ ಇವೆ. ವಯೋವೃದ್ಧರ ಬಗ್ಗೆ ಯಾರೋಬ್ಬರು ಚಿಂತಿಸುತ್ತಿಲ್ಲ. ಸಾರ್ವಜನಿಕ ಸ್ಥಳಗಳಲ್ಲಿ ವಯೋವೃದ್ಧರಿಗೆ ರಕ್ಷಣೆ ಇಲ್ಲದಂತಾಗಿದೆ. ವೃದ್ಧರು ರಾತ್ರಿಯ ವೇಳೆಯಲ್ಲಿ ನೆಮ್ಮದಿಯಿಂದ ನಿದ್ದೆ ಮಾಡಲು ಅನೇಕ ಅಡ್ಡಿ ಆತಂಕಗಳು ಎದುರಾಗುತ್ತಿವೆ, ಮತ್ತು ಕೆಲವೊಂದು ಇಲಾಖೆಯ ಅಧಿಕಾರಗಳ ಕಿರುಕುಳದಿಂದ ವಯೋವೃದ್ಧರು ನರಕಯಾತನೆಯನ್ನು ಅನುಭವಿಸುತ್ತಿದ್ದಾರೆ. ವೃದ್ಧರಿಗೆ ರಕ್ಷಣೆ ನೀಡದಿರುವ ಅಧಿಕಾರಿಗಳನ್ನು ಕರ್ತವ್ಯದಿಂದ ವಜಾ ಮಾಡಬೇಕು ಮತ್ತು ಕರ್ತವ್ಯಲೋಪವೆಸಗುವ ಅಧಿಕಾರಿಗಳಿಗೆ ಸೂಕ್ತವಾದ ಶಿಕ್ಷೆ ವಿಧಿಸುವುದು, ದಂಡ ವಿಧಿಸುವುದು, ಮತ್ತು ಸೂಕ್ತ ಕಾನೂನಿನ ಕ್ರಮ ಜರುಗಿಸುವುದು ಅಗತ್ಯವಾಗಿದೆ. ರಾತ್ರಿ ಹೊತ್ತಿನಲ್ಲಿ ವಯೋವೃದ್ಧರು ಸೂಕ್ತ ರಕ್ಷಣೆಯಿಲ್ಲದೆ ಪರದಾಡುವಂತಾಗಿದೆ ಇವರು ನೆಮ್ಮದಿಯ ನಿದ್ದೆಮಾಡುವಲ್ಲಿ ವಿಫಲರಾಗಿರುತ್ತಾರೆ. ಇಂತಹ ವಯೋವೃದ್ಧರಿಗೆ ನೆಮ್ಮದಿಯ ಜೀವನ ಸಾಗಿಸಲು ಮತ್ತು ರಕ್ಷಣೆ ನೀಡಲು, ಆಶ್ರಯ ಒದಗಿಸಲು ಕನಿಷ್ಟ 5 ರಿಂದ 10ರವರೆಗೆ ವಿಶ್ರಾಂತಿ ಗೃಹಗಳನ್ನು ಸ್ಥಾಪಿಸುವುದು ಅಗತ್ಯವಾಗಿರುತ್ತದೆ.

---

## ಸಂದರ್ಶನ – 4

ಹೆಸರು : ಅಬ್ದುಲ್ ಬಾಷಾ

ವಯಸ್ಸು : 63

ಊರು : ಮೂಲತಃ ಯಾದಗಿರಿ R/o ಮುಸ್ಲಿಂ ಪುರ ಓಣಿ

ಹೆಂಡತಿ : ಜಹೀದಾ ಬೇಗಂ ( ಜೀವಂತ ವಾಗಿರುವುದಿಲ್ಲ )

ಮಕ್ಕಳು : 5 ಗಂಡು+3 ಹೆಣ್ಣು = 8

ಪ್ರಸ್ತುತ ವಾಸ : ಯಾದಗಿರಿಯ ಮುಸ್ಲಿಂ ಪುರ ಓಣಿಯಲ್ಲಿ

ಉದ್ಯೋಗ : ಐಸ್ ಕ್ರೀಮ್ ವ್ಯಾಪರ

ಅಬ್ದುಲ್ ಬಾಷಾರವರ ಮನದಾಳದ ಅನಿಸಿಕೆಗಳು

ದಿನಾಂಕ 12–07–05 ರಂದು ಯಾದಗಿರಿ ನಗರ ಪ್ರದೇಶದ ಮುಸ್ಲಿಂಪೂರ ಓಣಿಯಲ್ಲಿ ಜೀವನವನ್ನು ಸಾಗಿಸುತ್ತಿದ್ದ ಅಬ್ದುಲ್ ಭಾಷಾರವರ ಗೃಹಕ್ಕೆ ಸಂದರ್ಶನಕ್ಕೆ ಬೇಟಿ ನೀಡಿದಾಗ ಸಂದರ್ಶನ ಸಮಯದಲ್ಲಿ ಅಬ್ದುಲ್ ಬಾಷಾರವರ ಜೀವನದ ನೋವು, ನಲಿವು ತಮ್ಮ ವೃದ್ಧಾಪ್ಯ ಜೀವನದ ಸತ್ಯ ಸಂಗತಿಗಳನ್ನು ನನ್ನಂದೊದಿಗೆ ಹಂಚಿಕೊಂಡಿದ್ದಾರೆ. ಇವರು ಜನ್ಮವು 1946 ರ ರಲ್ಲಿ ಆಯಿತು ಮತ್ತು 1971 ರಲ್ಲಿ ಜಹೀದಾ ಬೇಗಂ ಎಂಬ ಕನ್ಯೆಯೊಂದಿಗೆ ವಿವಾಹ ಮಾಡಿಕೊಂಡು ಸಂಸಾರ ಎನ್ನುವ ಸಾಗರದಲ್ಲಿ ಈಜತೊಡಗಿದರು. ತಮ್ಮ ಜೀವನದುದ್ದಕ್ಕೂ ಕಷ್ಟಗಳನ್ನು ಎದುರುಸುತ್ತಾ ಜೀವನ ಸಾಗಿಸಿರುತ್ತಾರೆ. ಅಲ್ಲದೆ ಐದು ಗಂಡು

ಮತ್ತು ಮೂರು ಹೆಣ್ಣು ಮಕ್ಕಳಿಗೆ ಜನ್ಮ ನೀಡಿರುತ್ತಾರೆ ಆದರೆ ಇಂದು ಆಧುನಿಕ ಸಮಾಜದಲ್ಲಿ ಎಲ್ಲಾ ಗಂಡು ಮಕ್ಕಳಿಗೆ ಮತ್ತು ಹೆಣ್ಣು ಮಕ್ಕಳಿಗೆ ವಿವಾಹ ಮಾಡಿಕೊಟ್ಟಿರುತ್ತಾರೆ. ಆದರೆ ಈಗ ಇವರು ತಮ್ಮ ಧರ್ಮಪತ್ನಿಯನ್ನು ಕಳೆದು ಕೊಂಡಿರುತ್ತಾರೆ. ಮಕ್ಕಳು ತಂದೆಯಿಂದ ಬೇರೆ ಯಾಗಿರುತ್ತಾರೆ ಜೀವನ ಪೂರ್ತಿ ಸದಾ ದುಡಿಮೆಯಲ್ಲಿ ತೊಡಗಿ ಮಕ್ಕಳ ಭವಿಷ್ಯದ ಬಗ್ಗೆ ಚಿಂತೆ ಮಾಡಿ ಅವರ ಯಶಸ್ವಿಯ ಹಾದಿಯನ್ನು ನೋಡುತ್ತಾ ಸದಾ ಕಾಲ ಕಳೆಯುತ್ತಿದ್ದಾರೆ. ದೇವರ ಪ್ರಾರ್ಥನೆ ಮಾಡುತ್ತಾ ದರ್ಗಾದಲ್ಲಿ ಕಸಬಳಿಯುತ್ತಾ ದರ್ಗಾ, ದೇವಸ್ಥಾನದಲ್ಲಿ ರಾತ್ರಿ ವಾಸಮಾಡುತ್ತಿದ್ದಾರೆ. ಇವರ ಐದು ಗಂಡು ಮಕ್ಕಳು ಇವರಿಂದ ದೂರ ಹೋಗಿರುತ್ತಾರೆ ಮೊಮ್ಮಕ್ಕಳ ಪ್ರೀತಿ ಸಿಗದೆ ಮಕ್ಕಳ ವಾತ್ಸಲ್ಯ ಕಾಣದೆ ತಮ್ಮ ಜೀವನದ ನರಕಯಾತನೆಯನ್ನು ಮತ್ತೊಬ್ಬರ ಹತ್ತಿರ ಹೇಳಿಕೊಳ್ಳದೆ ಮಾನಸಿಕವಾಗಿ ಅಸ್ತವ್ಯಸ್ತರಾಗಿರುತ್ತಾರೆ. ಯಾವ ದರ್ಗಾದಲ್ಲಿ ಪ್ರಾರ್ಥನೆ ಮಾಡಿದರು ಯಾವ ದೇವಸ್ಥಾನದಲ್ಲಿ ವಾಸಮಾಡಿದರೂ ಮಾನವನಿಗೆ ಜೀವಿಸುವುದಕ್ಕೆ ಅತ್ಯವಶ್ಯಕವಾಗಿ ಬೇಕಾಗಿರುವುದು ಆಹಾರ, ಬಟ್ಟೆ ಯಾವ ದೇವರು ನೀಡಲಾರದು. ಅಥವ ಬೇರೆ ಯಾವುದೇ ವ್ಯಕ್ತಿಗಳು ಕೊಡಲಾರರು, ಇದಕ್ಕಾಗಿ ತಮ್ಮ ಜೀವನವನ್ನು ಸಾಗಿಸುವುದಕ್ಕಾಗಿ ಸ್ವಾವಲಂಬಿಯಾಗಿ ದುಡಿದು ಬದುಕಬೇಕು ಎನ್ನುವ ಛಲವಾದಿಗಳಾಗುತ್ತಾರೆ. ಅದಕೋಸ್ಕರ ಇವರು ಐಸ್‌ಕ್ರೀಮ್ ಮಾರಾಟದ ವೃತ್ತಿಯನ್ನು ಆಯ್ಕೆ ಮಾಡಿಕೊಂಡು ಅದೇ ವೃತ್ತಿಯಲ್ಲಿ ಮುಂದುವರೆದಿದ್ದಾರೆ. ವೃತ್ತಿಯಿಂದ ಬರುವ ಅಲ್ಪ ಆದಾಯದಲ್ಲಿ ತಮಗೆ ಬೇಕಾಗಿರುವ ಆಹಾರ, ಬಟ್ಟೆ ಮತ್ತು ಇನ್ನಿತರ ಅವಶ್ಯಕ ವಸ್ತುಗಳನ್ನು ಪೂರೈಸಿಕೊಳ್ಳುತ್ತಿದ್ದಾರೆ. (ಇಂತಹ ವ್ಯಕ್ತಿಗೆ ಮುಪ್ಪಿನ ವಯಸ್ಸಿನಲ್ಲಿ ಸಿಗಬೇಕಾದ ಮಾನಸಿಕ ನೆಮ್ಮದಿ, ದೊರಕಿಸಿಕೊಡುವುದು ಅವಶ್ಯಕವಾಗಿದೆ) ಬಿಸಿಲು, ಮಳೆ ಎನ್ನದೆ ತಮ್ಮ ವೃತ್ತಿಯಲಿ ಮಗ್ನರಾಗಿರುತ್ತಾರೆ. ಸಣ್ಣ ಸಣ್ಣ ಮಕ್ಕಳು ಐಸ್‌ಕ್ರೀಮ್ ತೆಗೆದುಕೊಳ್ಳಲು ಬಂದಾಗ ಅವರಲ್ಲಿ ಮಮತೆ, ವಾತ್ಸಲ್ಯ ಕಂಡುಕೊಳ್ಳುತ್ತಿದ್ದೇನೆ ಎಂದು ತಮ್ಮ ಮನದಾಳದ ಮಾತುಗಳಿಂದ ತಮ್ಮ ನೋವನ್ನು ನಮ್ಮೊಂದಿಗೆ ಹಂಚಿಕೊಂಡಿದ್ದಾರೆ. ಇಂತಹ ಅನೇಕ ಮುಪ್ಪಿನ ವಯಸ್ಸಿನಲ್ಲಿ ವೃದ್ಧರಿಗೆ ಮಾನಸಿಕ ನೆಮ್ಮದಿ ಮತ್ತು ಆಶ್ರಯ ದೊರಕಿಸಿಕೊಡುವುದು ಸಮಾಜದ ಪ್ರತಿಯೊಬ್ಬ ಪ್ರಜೆಯ ಕರ್ತವ್ಯ.

## ಸಂದರ್ಶನ – 5

ಹೆಸರು : ಭೀಮವ್ವ ಗಂಡ ದಿವಾಂಗತ ರಾಮಣ್ಣ (ವಿಧವೆ)

ಗಂಡ : ದಿವಾಂಗತ ರಾಮಣ್ಣ

ವಾಯಸ್ಸು : 65

ಊರು : ಕಂದುಕೂರ.

ಪ್ರಸ್ತುತವಾಸ : ಯಾದಗಿರಿ – (ಕೋಟಗರವಾಡ)

ಮಕ್ಕಳು : 3 ಹೆಣ್ಣು

ದಿನಾಂಕ 10–7–09 ರಂದು ಸಂದರ್ಶನಕ್ಕೆ ಶ್ರೀಮತಿ. ಭೀಮವ್ವ ಗಂಡ ದಿ ॥ ರಾಮಣ್ಣ ನವರ ಮನೆಗೆ ಸಂದರ್ಶನಕ್ಕೆ ಹೋಗಿದ್ದಾಗ ಶ್ರೀಮತಿ ಬೀಮವ್ವ ಗಂಡ ದಿ ॥ ರಾಮಣ್ಣ (ವಿಧವೆ) ತಮ್ಮಲ್ಲಿರುವ ಅಂತರಾಳದ ನೋವುವನ್ನು ನಮ್ಮೊಂದಿಗೆ ಹಂಚಿಕೊಂಡಿದ್ದಾರೆ. ಬೀಮವ್ವನವರ ಗಂಡ ದಿ॥ ರಾಮಣ್ಣ ತಮ್ಮಲ್ಲಿರುವ ಪತಿಯು 15 ವರ್ಷಗಳ ಹಿಂದೆಯೇ ಮೂರು ಹೆಣ್ಣು ಮಕ್ಕಳನ್ನು ಹೆಂಡತಿಯ ಮಡಿಲ್ಲಿ ಬಿಟ್ಟು ಮರಣಕ್ಕೆ ತುತ್ತಾಗಿದ್ದರೆ. ಶ್ರೀಮತಿಯು ಅನಕ್ಷರಸ್ಥಳು ಆಗಿರುದರಿಂದ ಇವರಿಗೆ ಸರಕಾರದ ಯಾವುದೇ ಸೌಲಭ್ಯಗಳು ಸಿಕ್ಕಿರುವುದಿಲ್ಲ ತಮ್ಮ ಪತಿಯ ಮರಣದನಂತರ ಸಂಸಾರವನ್ನು ತಾವೇ ನೆಡಿಸಿಕೊಂಡು ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ಚಿಂತನೆ ಮಾಡಿ ಹಗಲಿರುಳು ಎನ್ನದೆ ದುಡಿಮೆಯಲ್ಲಿ ಮಗ್ನರಾಗಿರುತ್ತಾಳೆ, ಇವರಿಗೆ ಯಾವುದೇ ರೀತಿಯ ಉದೋಗದ ಅನುಭವ ಇಲ್ಲದಿರುವುದು

ಇನ್ನೊಂದು ಚಿಂತೆಯಾಗಿದೆ ಕೆಲವೊಂದು ಸಣ್ಣ ಪುಟ್ಟ ಕೂಲಿ ಕೆಲಸಕ್ಕೆ ಹೋಗುವುದು ಮತ್ತು ಅವರಿವರ ಮನೆಯ ಪಾತ್ರೆ ತೊಳೆಯುವುದು ಬಟ್ಟೆಗಳನ್ನು ಶುಚಿಗೊಳಿಸುವುದು ಇನ್ನಿತರ ಕಾಯಕದಿಂದ ಬರುವಂತಹ ಸಂಬಳ (ಅಥವ ಸಂಭಾವನೆ) ದಿಂದ ತಮ್ಮ ಮೂರು ಹೆಣ್ಣು ಮಕ್ಕಳ ಸಮೇತ ವಾಸವಾಗಿರುತ್ತಾರೆ. ಇವರಿಗೆ ಮೂಲಭೂತ ಸೌಕರ್ಯಗಳಾದ ವಸತಿ, ಪಡಿತರ ಚೀಟಿ, ಚುನಾವಣಾ ಪತ್ರ ಮುಂತಾದವುಗಳು ದೊರಕಿರುವುದಿಲ್ಲ. ಸರಕಾರದ ಯಾವುದೇ ಒಂದು ಸೌಲಭ್ಯವನ್ನು ಪಡೆಯಬೇಕಾದರೆ ಮೇಲಿನ ಮೂರು ಅಂಶಗಳಲ್ಲಿ ಒಂದನ್ನಾದರು ಹೊಂದಿರಲೇಬೇಕು ಎನ್ನುವುದು ಇತ್ತೀಚಿನ ಕಾನೂನು ನಿಯಮವಾಗಿದೆ. ಇದರಿಂದ ಇವರಿಗೆ ಯಾವುದೇ ಸೌಕರ್ಯಗಳನ್ನು ಪಡೆಯಲು ಅನರ್ಹರಾಗಿರುತ್ತಾರೆ. ಮೊದಲೆ ಗಂಡು ಮಕ್ಕಳು ಇಲ್ಲದಿರುವುದರಿಂದ ಒಂದು ಚಿಂತೆಯಾಗಿದ್ದರೆ, ತನಗೆ ಪತಿ ಇಲ್ಲದಿರುವುದು ಮತ್ತೊಂದು ಚಿಂತೆಯಾಗಿದೆ. ಪ್ರಸ್ತುತವಾಗಿ ಈ ಮೂರು ಹೆಣ್ಣು ಮಕ್ಕಳ ವಿದ್ಯಾಭ್ಯಾಸದ ಚಿಂತೆ ಅವರ ಮದುವೆ ಮತ್ತು ಮದುವೆ ಮಾಡುವುದಕ್ಕೆ ತಗಲುವ ವೆಚ್ಚದ ಚಿಂತೆ ಈ ಎಲ್ಲಾ ಚಿಂತೆಗಳನ್ನು ಎದುರಸುತ್ತಲೇ ಇವರಿಗಾಗಿ ಯಾರು ಆಶ್ರಯ ನೀಡದಿರುವುದೇ ಮತ್ತೊಂದು ಚಿಂತೆಯಾಗಿದೆ. ಸಮಾಜದಲ್ಲಿ ನಾನು ಏಕೆ ಬಾಳಬೇಕು ಯಾಕೆ ಬದುಕ ಬೇಕು ನಮ್ಮಂತಹ ಬದುಕನ್ನು ಸಾಗಿಸುವವರು ಈ ಸಮಾಜದೊಳಗೆ ಯಾರದರು ಇದ್ದಾರೆ ನಮಗೆ ಸಾವು ಯಾಕಾದರು ಬರುವುದಿಲ್ಲ ಎಂದು ತಮ್ಮ ದಿನನಿತ್ಯದ ಜೀವನದ ಬಂಡಿಯನ್ನು ನಡೆಸುವಂತಹವಳಾಗಿದ್ದಾಳೆ. ಆದರೆ ಸಮಾಜದೊಳಗೆ ಸ್ವಾಭಿಮಾನಿಯಾಗಿ ಸ್ವಾವಲಂಬಿಯಾಗಿ ಮತ್ತು ಮಾನ ಮರ್ಯಾದೆಗೆ ಮಹತ್ವವನ್ನು ನೀಡುವಂತಹವಳಾಗಿರುತ್ತಾಳೆ ಪ್ರಾಣಕ್ಕಿಂತ ಮಾನ ದೊಡ್ಡದು ಎನ್ನುವ ಮಾತನ್ನು ಉಳಿಸಿಕೊಳ್ಳುವಂತಹ ಕುಟುಂಬದವಳಾಗಿರುತ್ತಾಳೆ. ಸಮಾಜದ ಪ್ರತಿಯೊಬ್ಬ ವ್ಯಕ್ತಿಗಳು ಇವರಕಡೆ ಹೀನಾ ದೃಷ್ಟಿಯಿಂದ ನೋಡಲಾರರು. ಇಂತಹ ಒಂದು ಕುಟುಂಬಕ್ಕೆ ಆಸರೆ ಬೇಕೆ ಬೇಕು ಆದರೆ ಆಸರೆ ನೀಡುವವರ್‍ಯಾರು ಇವರಿಗೆ ಮೂಲಭೂತ ಸೌಕರ್ಯಗಳನ್ನು ದೊರಕಿಸಿ ಕೊಡುವವರು ಯಾರು ಎನ್ನುವ ಒಂದು ಸಮಸ್ಯೆಯಾಗಿದೆ ಅದೇಷ್ಟೋ ನಿರ್ಗತಿಕ ಮಹಿಳೆಯರು ವೃದ್ಧಾಪ್ಯವೇತನ ಪಡೆಯುತ್ತಿದ್ದಾರೆ, ವಿದುವಾ ವೇತನ ಪಡೆಯುತ್ತಿದ್ದಾರೆ

ಸರ್ಕಾರದಿಂದ ಸಂಘ ಸಂಸ್ಥೆಗಳ ಯೋಜನೆಗಳನ್ನು ಸದುಪಯೋಗ ಮಾಡಿಕೊಂಡಿದ್ದಾರೆ. ಮತ್ತು ಮಾಡಿಕೊಟ್ಟಿದ್ದಾರೆ ಇದಕ್ಕೆ ಈ ಕುಟುಂಬಕ್ಕೆ ವಿಧಾವ ವೇತನ ಮತ್ತು ವೃದ್ದಾಪ್ಯ ವೇತನವನ್ನು ಸರಕಾರದಿಂದ ಆರ್ಥಿಕ ನೆರವು ಅವಶ್ಯಕವಾಗಿದೆ. ಆಸರೆ ಇಲ್ಲದಿರುವ ಕುಟುಂಬಗಳಿಗೆ ಆಸರೆ ನೀಡುವುದು ಅವಶ್ಯಕ.

---

## ಸಂದರ್ಶನ –6

| | | |
|---|---|---|
| ಹೆಸರು | : | **ಶರಣಪ್ಪ ತಂದೆ ಮಲ್ಲಪ್ಪ** |
| ಹೆಂಡತಿ | : | ಶಾರದಮ್ಮ ಗಂಡ ಶರಣಪ್ಪ |
| ವಯಸ್ಸು | : | ಶರಣಪ್ಪ 69, ಶಾರದಮ್ಮ 66 |
| ಊರು | : | ಹಳಿಗೇರಾ. ( ಯಾದಗಿರ ತಲ್ಲೂಕು) |
| ವೃತ್ತಿ | : | ವ್ಯವಸಾಯ |
| ಮಕ್ಕಳು | : | ನಾಲ್ಕು ಗಂಡು, ಮೂರು ಹೆಣ್ಣು ಒಟ್ಟು ಏಳು |

ದಿನಾಂಕ 22–07–09 ರಂದು ಯದಗಿರಿ ತಾಲ್ಲೂಕಿನ ಹಳಿಗೇರಾ ಗ್ರಾಮಕ್ಕೆ ಸಂದರ್ಶನಕ್ಕಾಗಿ ಶ್ರೀಯುತರ ಮನೆಗೆ ಭೇಟಿ ನೀಡಿದಾಗ ಶ್ರೀಯುತರ ಸಮಸ್ಯೆಗಳನ್ನು ಕೇಳಿ ಪ್ರಪಂಚದಲ್ಲಿ ಎಷ್ಟೋಂದು ವಯೋವೃದ್ದರು ಎಂತಹ ಸಮಸ್ಯೆಗಳನ್ನು ಎದುರುಸುತ್ತಿದ್ದಾರೆ. ಎನ್ನುವ ಪ್ರಶ್ನೆ ಕಾಡತೊಡಗಿತು ಇಂತಹ ಸಮಸ್ಯೆಗಳಿಗೆ ಪರಿಹರ ಎಂದು ಈ ಸಮಸ್ಯೆಗಳಿಗೆ ಪರಿಹಾರ ನೀಡುವವನು ಯಾರು? ಎನ್ನುವ ಒಂದು ಚಿಂತೆ ಕಾಡತೊಡಗಿತು. ಶ್ರೀಯುತರು ಒಂದು ಭಾರತೀಯ ಸಂಪ್ರದಾಯತೆ ಒಂದು ಅವಿಭಕ್ತ ಕುಟುಂಬವಾಗಿರುತ್ತದೆ. ಪ್ರಾಚೀನಕಾಲದಲ್ಲಿ ಅವಿಭಕ್ತ ಕುಟುಂಬದಲ್ಲಿ ವಯೋವೃದ್ಧರ ರಕ್ಷಣೆ ಮತ್ತು ಆರೈಕೆ ಬಹಳಷ್ಟು ಪ್ರಮಾಣದಲ್ಲಿ ಉತ್ತಮವಾಗಿರುತಿತ್ತು. ನಗರೀಕರಣದ ಪ್ರಭಾವದಿಂದ ಇಂದು ಸಮಾಜದಲ್ಲಿ ನಿರಂತರ ಬದಲಾವಣೆ ಹೊಂದುತ್ತಿರುವದರಿಂದ ಅವಿಭಕ್ತ ಕುಟುಂಬಗಳು

ವಿಭಕ್ತಕುಟುಂಬಗಳಾಗಿ ಮಾರ್ಪಟ್ಟು ಹೊಂದುತ್ತಿರುವುದು ವಿಷಾದದ ವಿಷಯವಾಗಿದೆ. ಇಂತಹ ಪರಿವರ್ತನೆ ಗೊಳ್ಳುತ್ತಿರುವ ಸಮಾಜದಲ್ಲಿ ಕೆಲವೊಂದು ಗ್ರಾಮಾಂತರ ಪ್ರದೇಶಗಳಲ್ಲಿ ಅಪರೂಪಕ್ಕೊಂದು ಅವಿಭಕ್ತ ಕುಟುಂಬಗಳಲ್ಲಿ ಕಂಡು ಬರುತ್ತದೆ. ಅಂತಹ ಗ್ರಾಮಗಳಲ್ಲಿ ಯಾದಗಿರಿ ತಾಲ್ಲೂಕಿನ ಹಳಿಗೇರಾ ಗ್ರಾಮದ ಒಂದು ಅವಿಭಕ್ತ ಕುಟುಂಬದಲ್ಲಿ ವಾಸವಗಿರುವ ಗಂಡ-ಹೆಂಡತಿ ವಯೋವೃದ್ದರ ಸ್ಥಿತಿಯು ಶೋಚನೀಯ ಹಂತಕ್ಕೆ ತಲುಪಿರುತ್ತದೆ. ಶ್ರೀ ಶರಣಪ್ಪ ತಂದೆ ಮಲ್ಲಪ್ಪ ವಯಸ್ಸು 69 ಇವರು ಅಂಗವಿಕಲರು ಯೌವ್ವನದ ವಯಸ್ಸಿನಲ್ಲಿ ಉತ್ತಮ ಆರೋಗ್ಯವಂತರಾಗಿದ್ದು ಜೀವನದಲ್ಲಿ ಸಾಕಷ್ಟು ಶ್ರಮ ವಹಿಸಿದ್ದಾರೆ 57 ನೇ ವಯಸ್ಸಿನವರೆಗೆ ಇವರು ಶ್ರಮವನ್ನು ವಹಿಸುತ್ತಿದ್ದರು. ತಮ್ಮ 58ನೇ ವಯಸ್ಸಿನಲ್ಲಿ ರಸ್ತೆ ಅಪಘಾತದಲ್ಲಿ ಒಂದು ಕಾಲನ್ನು ಕಳೆದುಕೊಂಡು ಮಕ್ಕಳು ಮತ್ತು ಹೆಂಡತಿಗೆ ಭಾರವಾಗಿರುತ್ತನೆ. ಪ್ರಸ್ತುತವಾಗಿ ಇವರ ಹೆಂಡತಿಯು ಅನಾರೋಗ್ಯದಿಂದ ನರಳುತ್ತಿದ್ದಾರೆ ಇವರು ತಮ್ಮ ತಾರುಣ್ಯ ವಯಸ್ಸಿನಲ್ಲಿ ಎಲ್ಲಾ ಗಂಡು ಹೆಣ್ಣು ಮಕ್ಕಳಿಗೆ ಮದುವೆ ಮಾಡಿರುತ್ತಾರೆ ಇಂದಿಗೂ ಕೂಡ ಕುಟುಂಬದ ಆಸ್ತಿಯ ಒಡೆತನವನ್ನು ಶ್ರೀಮಂತರ ಹೆಸರಿನಲ್ಲಿ ಇರುತ್ತದೆ ಮಕ್ಕಳು ಮತ್ತು ಸೊಸೆಯಂದಿರು ಮೊಮ್ಮಕ್ಕಳು ಸಮೇತ ವಾಸವಾಗಿರುತ್ತಾರೆ ಮೇಲ್ನೋಟಕ್ಕೆ ಇಂದು ಒಂದು ಅವಿಭಕ್ತ ಕುಟುಂಬವಾಗಿದ್ದು ಕಂಡು ಬಂದು ಕುಟುಂಬದಲ್ಲಿ ಒಳಕಲಹಗಳು ಸಾಕಷ್ಟು ಪ್ರಮಾಣದಲ್ಲಿ ಇರುತ್ತವೆ. ಮಕ್ಕಳು ಹೊಲಗದ್ದೆಯಲ್ಲಿ ಶ್ರಮವಹಿಸಿ ಕೆಲಸಮಾಡಿಬರುವ ಆದಾಯವನ್ನು ಸ್ವತಃ ತಾವೇ ಇಟ್ಟುಕೊಳ್ಳುತ್ತಾರೆ ಖರ್ಚುವೆಚ್ಚಗಳನ್ನು ನೋಡಿಕೊಳ್ಳುತ್ತಿರುವುದು ಶೋಚನೀಯ. ಇವರು ನಮ್ಮ ದಿನ ನಿತ್ಯದ ಖರ್ಚುಗಳಾದ ಔಷದಿ, ಉಪಚಾರ, ಆಸ್ಪತ್ರೆಗಾಗಿ ಹೋಗಿಬರುವುದು, ಆಸ್ಪತ್ರೆಯವೆಚ್ಚ ಮತ್ತಿತರ ಖರ್ಚುಗಳನ್ನು ಮಕ್ಕಳು ಮಾಡುತ್ತಿದ್ದರು ಕುಟುಂಬದಲ್ಲಿ ಇವರಿಗೆ ಉತ್ತಮ ಗುಣಮಟ್ಟದ ಆಹಾರ, ಪೂರೈಕೆ, ಬಟ್ಟೆ, ಉತ್ತಮವಾದಕೊಠಡಿ ಇನ್ನಿತರ ಸೌಕರ್ಯವನ್ನು ನೀಡಿವುದರಲ್ಲಿ ಮಕ್ಕಳು ಸಂಪೂರ್ಣ ವಿಫಲರಾಗಿರುತ್ತಾರೆ. ಇವರ ಮಕ್ಕಳು ಮತ್ತು ಸೊಸೆಯಂದಿರು ಇವರ ಆಸ್ತಿಗಾಗಿ ಸದಾ ಇವರ ಸಾವನ್ನು ಎದುರು ನೋಡುವಂತಹರಾಗಿದ್ದಾರೆ. ಈ ಎಲ್ಲಾ ಆಸ್ತಿಗಾಗಿ ಕೆಲವೊಮ್ಮೆ ತಂದೆ ಮಕ್ಕಳು ಮದ್ಯ ವಾದಿಗಳು ನಡೆದಿರುವುದು ಬೆಳಕಿಗೆ ಬಂದಿರುವ ವಿಷಯವಾಗಿದೆ.

ತಾಯಿಯು ಅನಾರೋಗ್ಯದಿಂದ ಬಳಲುತ್ತಿದ್ದರು ಅವರನ್ನು ಉಪಚರಿಸದೆ ವೈದ್ಯರಲ್ಲಿ ಖಾಯಿಲೆಯನ್ನು ತೋರಿಸದೆ ದುಡಿತದ ಆದಾಯವನ್ನು ತಮ್ಮ ವೈಯಕ್ತಿಕ ಆಸೆ ಆಕಾಂಕ್ಷೆಗಳಿಗೆ ಮತ್ತು ಹೆಂಡತಿಯರ ಸುಖಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ. ಇಂತಹ ಮಕ್ಕಳಿಗೆ ಯಕಾದರೂ ಜನ್ಮ ನೀಡಿದೆವು ಎಂದು ನೋವಿನಿಂದ ಹೇಳುತ್ತಿದ್ದಾರೆ. ಈ ವಯೋವೃದ್ದರುಮುಪ್ಪಿನ ವಯಸ್ಸಿನಲ್ಲಿ ಅನೋನ್ಯಜೀವನ ಸಾಗಿಸುತ್ತಿದ್ದಾರೆ. ತಮ್ಮಗಳ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳುವಲ್ಲಿ ಸಂಪೂರ್ಣ ವಿಫಲರಾಗುತ್ತಾರೆ ಮೊದಲೇ ಅಂಗವಿಕಲ ಮತ್ತು ಅನಾರೋಗ್ಯದಿಂದ ಬಳಲುತ್ತಿರುವ ಹೆಂಡತಿ ಆರೈಕೆ ಮಾಡಲಾರದಂತಹ ಮಕ್ಕಳು ಸಮಾಜದಲ್ಲಿ ಗೌರವ ಇಲ್ಲದಿರುವುದು ಮತ್ತು ತಮ್ಮ ಮುಪ್ಪಿನ ಮುಂದಿನ ಜೀವನದ ಬಗ್ಗೆ ಸದ ಯೋಚನೆಯಲ್ಲಿಯೆ ಕಾಲ ಕಳೆಯುವಂತಾಗಿದೆ ಎಂದು ತಮ್ಮ ನೋವಿನಿಂದ ಕೂಡಿದ ವೃದ್ಧಾಪ್ಯದ ಜೀವನವನ್ನು ಹೇಗೆ ಮೂಂದೂಡಬೇಕು ಎಂದು ಸಂದರ್ಶನದಲ್ಲಿ ವಿವರಿಸುತ್ತಾರೆ. ಇಂತಹ ಹಲವರು ಸಮಸ್ಯೆಗಳಿಗೆ ತುತ್ತಾಗಿ ಜೀವವನ್ನು ಕಳೆದುಕೊಳ್ಳುವುದು ಸತ್ಯದ ಘಟನೆಗಳು ಮೇಲಿಂದ ಮೇಲೆ ಜರಗುತ್ತಲೆ ಇವೆ. ಈ ಸಮಸ್ಯೆಗಳಿಗೆ ಶಾಸ್ವತವಗಿ ಕಡಿವಾಣ ಹಾಕಲು ಸಮಾಜದ ಪ್ರತಿಯೊಬ್ಬ ವ್ಯಕ್ತಿಗಳು ಸ್ವಪ್ರೇರಿತರಗಿ ವಯೋವೃದ್ಧರನ್ನು ರಕ್ಷಿಸಬೇಕು. ಕೆಲವೊಂದು ವ್ರದ್ಧಾಶ್ರಮಗಳಲ್ಲಿ ಆಶ್ರಯ ದೊರೆಯವಂತಗಬೇಕು ಮುಪ್ಪಿನ ದಿನಗಳನ್ನು ನೆಮ್ಮದಿಯಿಂದ ಕಳೆಯುವಂತಹವಾಗಬೇಕು ಎಂದಾಗಲೇ ವ್ರದ್ದರ ಸಮಸ್ಯೆಗಳು ಸ್ವಲ್ಪ ಪ್ರಮಾಣದಲ್ಲಿ ಕಡಿಮೆ ಮಾಡಬಹುದಗಿದೆ. ಇಂತಹವರಿಗಾಗಿ ಕೆಲವೊಂದು ಮಾರ್ಗಗಳು ಮತ್ತು ಸಲಹೆಗಳು ಮೂಲಭೂತ ಸೌಕರ್ಯಗಳು ಅವಶ್ಯಕವಾಗಿವೆ.

**ಕೆಲವೊಂದು ಮಾರ್ಗಗಳು ಮತ್ತು ಸಲಹೆಗಳು**

1) **ಇಂತಹ ವೃದ್ಧರಿಗಾಗಿ ವೃದ್ಧಾಪ್ಯವೇತನ ನೇರವಾಗಿ ಇವರಿಗೆ ಸೇರುವಂತಾಗಬೇಕು.**

2) **ಉಚಿತ ವೈದ್ಯಕೀಯ ಸೇವೆಯನ್ನು ಶೀಘ್ರದಲ್ಲಿಯೇ ಸಿಗುವಂತಹದಾಗಬೇಕು.**

3) **ಕುಟುಂಬದ ಸದಸ್ಯರ ಮನವೊಲಿಸಲು ಪ್ರಯತ್ನಿಸಬೇಕು.**

4) **ಮಕ್ಕಳ ಮೊಮ್ಮಕ್ಕಳ ಆರೈಕೆ ಸಿಗುವಂತಹದಾಗಬೇಕು.**

5) ಪ್ರತಿ ತಾಲ್ಲೂಕಿನಲ್ಲಿ ಕನಿಷ್ಟ ಐದು ವೃದ್ಧಾಶ್ರಮಗಳನ್ನು ಸ್ಥಾಪಿಸಬೇಕು.

6) ಸದಾ ನೆಮ್ಮದಿಯಿಂದಿರಲು ಪ್ರತಿಯೊಬ್ಬರು ಸಹಕರಿಸಬೇಕು.

## ಸಂದರ್ಶನ 7

ಹೆಸರು : ವೆಂಕಟಪ್ಪ ತಂದೆ : ಸಿದ್ದಪ್ಪ (ಅಂಗವಿಕಲ)

ವಯಸ್ಸು : 68

ಊರು : ಬೆಳಿಗೇರಾ ತಾ॥ ಯಾದಗಿರಿ.

ಹೆಂಡತಿ : ಗಿರಿಜೆಮ್ಮ (ತೀರಿಕೊಂಡಿದ್ದಾಳೆ.)

ಮಕ್ಕಳ : ಮೂರು ಗಂಡು, ನಾಲ್ಕು ಹೆಣ್ಣು ಒಟ್ಟು ಏಳು.

ದಿನಾಂಕ **21–7–2009** ರಂದು ಯಾದಗಿರಿ ತಾಲ್ಲೂಕಿನ ಬೆಳಿಗೇರಾಗ್ರಾಮಕ್ಕೆ ಬೇಟಿಮಾಡಿದಾಗ ಶ್ರೀ ವೆಂಕಟಪ್ಪನವರನ್ನು ಸಂದರ್ಶನ ಮಾಡಲಾಯಿತು. ಇವರಿಗೆ ಸುಮಾರು 68 ವರ್ಷಗಳಾಗಿರುತ್ತವೆ ಎಂದು ಅಂದಜು ಮಾಡಲಾಗಿದೆ. ಶ್ರೀ ವೆಂಕಟಪ್ಪನವರು ಪ್ರಸ್ತುತವಗಿ ಅಂಗವಿಕಲರಗಿದ್ದು ಇವರಿಗೆ ಮೂರು ಗಂಡು ಮಕ್ಕಳು ಮತ್ತು ನಾಲ್ಕು ಹೆಣ್ಣು ಮಕ್ಕಳು ಹೊಂದಿದ್ದಾರೆ. ಮೂರು ಗಂಡು ಮಕ್ಕಳ ಪೈಕಿ ಮೂರು ಹೆಣ್ಣು ಮಕ್ಕಳ ವಿವಾಹವನ್ನು ಮಾಡಿಕೊಡಲಗಿದೆ ಒಂದು ಗಂಡು ಒಂದು ಹೆಣ್ಣು ಮಕ್ಕಳ ವಿವಾಹ ಉಳಿದುಕೊಂಡಿರುತ್ತದೆ ಸಂಸಾರದ ಹೊರೆಯನ್ನು ಹಿರಿಯ ಮಗನಿಗೆ ವಹಿಸಿಕೊಡಲಾಗಿದೆ ಸಂಸಾರದ ಸಂಪೂರ್ಣ ಜವಾಬ್ದಾರಿಗಳನ್ನು ಹಿರಿಯ ಮಗನೇ ನೋಡಿಕೊಳ್ಳುತ್ತಾನೆ. ಹತ್ತು

ವರ್ಷಗಳ ಹಿಂದೆಯೇ ಶ್ರೀಯುತರು ತಮ್ಮ ಮಡದಿಯನ್ನು ಕಳೆದುಕೊಂಡಿದ್ದಾರೆ. ಮಡದಿಯ ಮರಣದಿಂದ ಶ್ರೀಯುತರು ಅನಾಥರಾಗಿದ್ದಾರೆ ಶ್ರೀಯುತರು ಬಹಳ ವರ್ಷಗಳವರೆಗೆ ಕೂಡಿಬಾಳಿದ ವ್ಯಕ್ತಿ. ಇಂದು ಎಲ್ಲಾ ಇದ್ದು ಇವತ್ತು ಏನು ಇಲ್ಲದೇ ನರಕಯಾತನೆಯನ್ನು ಅನುಭವಿಸುತ್ತಿದ್ದಾರೆ. ಮಕ್ಕಳು ಮೂಲತಃ ಕೃಷಿಯನ್ನು ಅವಲಂಬಿಸಿದ್ದಾರೆ ಇವರಿಗೆ ಯವುದೇ ಮೂಲದಿಂದ ಆದಾಯಬರದೆ ಕೇವಲ ಕೃಷಿಯಿಂದ ಬಂದಂತಹ ಆದಾಯದ ಮೇಲೆ ಇಡೀ ಕುಟುಂಬವೆ ಅವಲಂಬನೇಯಾಗಿದೆ. ಇವರಿಗೆ ಯಾರದೇ ಆಶ್ರಯವಿಲ್ಲದೆ ಯಾವ ಯೋಜನೆಗಳ ಉಪಯೋಗ ದೊರಕದೆ ಇವರ ಕುಟುಂಬ ಅತಂತ್ರ ಸ್ಥಿತಿಗೆ ತಲುಪಿದೆ ಶ್ರೀಯುತರು ಅಂಗವಿಕಲತೆ ಅನಾರೋಗದಿಂದ ನರಳುತ್ತಿದ್ದಾರೆ ಈಗ ಇವರಿಗೆ ಉಚಿತ ವೈದ್ಯಕೀಯ ಸೇವೆಯ ಅವಶ್ಯಕತೆ ಇರುತ್ತದೆ. ಇವರು ಆರ್ಥಿಕವಾಗಿ ಬಹಳ ಕಷ್ಟದಲ್ಲಿ ತೊಡಗಿರುವ ಕುಟುಂಬವಾಗಿದೆ ಮಕ್ಕಳು ತಮ್ಮ ವೈಯಕ್ತಿಕ ಆಸೆಗಾಗಿ ಬರುವಂತಹ ಆದಯವನ್ನು ತಾವೇ ಖರ್ಚು ವೆಚ್ಚಗಳನ್ನು ಮಾಡುತ್ತಿದ್ದಾರೆ. ಈ ವಯೋವೃದ್ಧನ ಆರೋಗ್ಯದ ಸ್ಥಿತಿಗೆ ಯೋಗ್ಯ ಚಿಕಿತ್ಸೆಗಾಗಿ ಹಣವನ್ನು ಖರ್ಚು ಮಾಡುತ್ತಿಲ್ಲದಿರುವುದು ಶೋಚನೀಯ ವಿಷಯವಗಿದೆ. ಶ್ರೀಯುತರು ಅಂಗವಿಕಲತೆ ಹೊಂದಿರುವುದರಿಂದ ಯಾವುದೇ ದುಡಿಮೆಯಲ್ಲಿ ಪಾಲ್ಗೊಳ್ಳಲು ಸಾದ್ಯವಾಗದೆ ಕೇವಲ ಮಕ್ಕಳ ಆಸರೆಯನ್ನು ಬಯಸುವಂತರಾಗಿದ್ದರೆ. ಇವರಿಗೆ ವೃದ್ಧಾಪ್ಯದಲ್ಲಿ ಸಣ್ಣ-ಮುಟ್ಟ ಕಾಯಿಲೆಗಳು ಬರತೊಡಗಿರುತ್ತವೆ, ಪ್ರಸ್ತುತವಾಗಿ ಇವರಿಗೆ ಅಂದತ್ವವು ಅವರಿಸಿಕೊಂಡಿರುತ್ತದೆ ಆದರೆ ಇವರು ಸ್ಪಷ್ಟವಗಿ ಮಾತನಾಡಬಲ್ಲ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಇವರಿಗೆ ಮತ್ತು ಊರಿನಲ್ಲಿ ಯಾರಿಗದರೂ ಏನೇ ಅನಾಹುತವಾದರೆ ನಗರ ಪ್ರದೇಶಕ್ಕೆ ಹೋಗಿಬರಲು ಉತ್ತಮ ರಸ್ತೆ

ಇಲ್ಲದಿರುವುದು ಸರಿಯಾದ ಸಮಯಕ್ಕೆ ವಾಹನಗಳು ಸಿಗದಿರುವುದು ವಿಷಾದದ ಸಂಗತಿಯಾಗಿದೆ. ಶ್ರೀಯುತರು ಕುಟುಂಬದಲ್ಲಿ ಆರೈಕೆಯು ಗುಣಮಟ್ಟದಲ್ಲಿ ಇಲ್ಲದಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಇವರಿಗೆ ಇನ್ನೂ ಇಬ್ಬರ ಮಕ್ಕಳ ವಿವಾಹದ ಚಿಂತೆ ಕಾಡತೊಡಗಿದೆ ಹೆಂಡತಿಯ ಮರಣದ ನಂತರ ಆ ಆಘಾತಕ್ಕೆ ತೀವ್ರವಾಗಿ ನೊಂದು ಇಂದು ಮಾನಸಿಕ ನೆಮ್ಮದಿ ಇಲ್ಲದಂತೆ ಕಾಣುತ್ತದೆ. ಸರಿಯಾದ ಸಮಯಕ್ಕೆ ಊಟ ಇಲ್ಲದಿರುವುದು, ಉತ್ತಮ ರೀತಿಯ ಬಟ್ಟೆಗಳು ಸಿಗದಿರುವುದು, ಧಾರ್ಮಿಕವಾಗಿ ತುಳಿತಕ್ಕೆ ಒಳಗಾಗಿರುವುದು ಇವರ ಕಷ್ಟ ಸುಖಗಳಿಗೆ ಸ್ಪಂದಿಸುವ ಸ್ನೇಹಿತರು ಇಲ್ಲದಿರುವುದು, ಕ್ಷಣಕ್ಷಣಕ್ಕೆ ಆರೋಗ್ಯ ಸ್ಥಿತಿಗಳಲ್ಲಿ ಬದಲಾವಣೆ ಕಂಡುಬರುವುದು ವೃದ್ಧಾಪ್ಯದಲ್ಲಿ ಎಲ್ಲಾ ವೃದ್ದರಿಗೆ ಬರುವಂತಹ ಸಾಮಾನ್ಯ ಮತ್ತು ಸಹಜ ಕಾಯಿಲೆಗಳೇ ಬರುತ್ತಿರುವುದು ಈ ವೃದ್ದನಿಗೆ ಕಷ್ಟಕರವಾಗಿದೆ ಮತ್ತು ಮಕ್ಕಳ ಪ್ರೀತಿ ಮೊಮ್ಮಕ್ಕಳ ವ್ಯಾತ್ಸಲ್ಯ ಸಿಗುತ್ತಿಲ್ಲ ಇದರಿಂದ ಸದಾ ನೋವಿನಲ್ಲಿಯೇ ಕಾಲಕಳೆಯುವಂತಹ ಪರಿಸ್ಥಿತಿ ಬಂದಿರುತ್ತದೆ. ಗಂಡನ ಮನೆಯಿಂದ ತವರಿಗೆ ಬರುವಂತಹ ಹೆಣ್ಣುಮಕ್ಕಳು ಸಹ ತಂದೆಯ ಯೋಗ ಕ್ಷೇಮವನ್ನು ವಿಚಾರಿಸುವಂತಹ ಗೋಜಿಗೆ ಹೋಗುತ್ತಿಲ್ಲ ಸದಾ ಒಂದು ಗುಡಿಸಲಲ್ಲಿ ವಾಸಿಸುತ್ತಿದ್ದು ಪ್ರತಿಯೊಂದು ಕೆಲಸವೂ ಅಂಧತ್ವ ಕಳೆದುಕೊಂಡಿರುವದರಿಂದ ಪರಸ್ಥಿತಿ ಗಂಬೀರವಾಗಿರತ್ತದೆ. ದೈಹಿಕ ಸಾಮರ್ಥ್ಯ ಕಳೆದುಕೊಂಡು ಮಾನಸಿಕ ನೆಮ್ಮದಿ ಇಲ್ಲದಿರುವುದರಿಂದ ಕೇವಲ ಸಾವನ್ನು ಎದುರು ನೋಡುತ್ತ ಮುಂದಿನ ದಿನಗಳನ್ನು ಹೇಗೆ ಕಳೆಯಬೇಕು ಮತ್ತು ತನ್ನ ದೇಹದಿಂದ ಪ್ರಾಣಪಕ್ಷಿ ಯಾವಾಗ ಹಾರಿ ಹೊದಿತೋ ಎಂದು ಕಾಯುತ್ತಿದ್ದಾರೆ. ಮಕ್ಕಳ ಮಮತೆಯಿಂದ ಪ್ರೀತಿ ವಾತ್ಸಲ್ಯದಿಂದ ವಂಚಿತರಾದ ಇಂತಹ ಸಾಕಷ್ಟು ವಯೋವೃದ್ಧರು ಪ್ರಸ್ತುತ ಸಮಾಜದಲ್ಲಿ ಕಂಡುಬರುತ್ತಾರೆ.

ಇಂತಹವರಿಗೆ ಮುಪ್ಪಿನದಿನಗಳನ್ನು ನೆಮ್ಮದಿಯಿಂದ ಕಳೆಯುವುದಕ್ಕೆ ವೃದ್ಧಾಶ್ರಮಗಳಿಗೆ ಸೇರ್ಪಡಿಸುವುದು ಅಗತ್ಯವಾಗಿದೆ.

## ಸಂದರ್ಶನ 8

**ಹೆಸರು : ಲಲಿತಾಬಾಯಿ ಗಂಡ ರಾಮಸ್ವಾಮಿ (ಬಂಜೆ)**

**ವಯಸ್ಸು : 67**

**ಊರು : ಕಾಳಬೆಳಗುಂದಿ. ತಾ॥ ಯಾದಗಿರಿ.**

**ಮಕ್ಕಳು : ಇಲ್ಲ**

ದಿನಾಂಕ 18–07–2009 ರಂದು ಯಾದಗಿರಿ ತಾಲ್ಲೂಕಿನ ಕಾಳ ಬೆಳಗುಂದಿ ಗ್ರಾಮಕ್ಕೆ ಶ್ರೀಮತಿ ಲಲಿತಾಬಾಯಿ ಗಂಡ ರಾಮಸ್ವಾಮಿಯವರ ಮನೆಗೆ ಸಂದರ್ಶಕ್ಕೆ ಅಥವಾ ಕ್ಷೇತ್ರ ಕಾರ್ಯಕ್ಕೆ ಭೇಟಿ ಕೊಟ್ಟಾಗ ಶ್ರೀಮತಿ ಲಲಿತಾಬಾಯಿ ಮತ್ತು ಅವರ ಗಂಡ ರಾಮಸ್ವಾಮಿಯವರ ಕರಳುಕಿತ್ತುವಂತಹ ಮನದಾಳದ ನೋವನ್ನು ಹಂಚಿಕೊಂಡಿದ್ದಾರೆ. ಸಮಾಜದಲ್ಲಿ ಪ್ರತಿಯೊಬ್ಬ ಸ್ತ್ರೀ ಪುರುಷರು ವಿವಾಹದ ನಂತರ ಮಕ್ಕಳು ಪಡೆಯಬೇಕೆಂದು ಪ್ರತಿಯೊಂದು ದೇವರಿಗೆ ಹರಿಕೆಹೊತ್ತುಕೊಳ್ಳುತ್ತಾರೆ ಮಕ್ಕಳು ಪಡೆದ ನಂತರ ಮಕ್ಕಳ ಭವಿಷ್ಯ ರೂಪಿಸುವುದಕ್ಕೆ ತಮ್ಮ ಜೀವನವನ್ನು ಧಾರೆಯೆರೆದು ಮಕ್ಕಳ ಭವಿಷ್ಯವನ್ನು ರೂಪಿಸುತ್ತಾರೆ. ಮಕ್ಕಳಿಗೆ ವಿವಹ ಮಾಡುತ್ತಾರೆ, ಉನ್ನತ ಶಿಕ್ಷಣವನ್ನು ಕೊಡಿಸುತ್ತಾರೆ, ಆದರೆ ಅದೇ ಮಕ್ಕಳು ತಂದೆ– ತಾಯಿಗಳನ್ನು ವೃದ್ಧಾಪ್ಯದಲ್ಲಿ ಕಡೆಗಣಿಸಿ ತಂದೆ – ತಯಿಗಳನ್ನು ಸರಿಯದ

ರೀತಿಯಲ್ಲಿ ನೋಡಿಕೊಳ್ಳದೆ ಇರುವುದು ಸಾಮನ್ಯವಾಗಿ ಕಂಡು ಬರುತ್ತಿದೆ. ವೃದ್ಧ ತಂದೆ ತಯಿಗಳು ಯಾಕಾದರು ಇಂತಹ ಮಕ್ಕಳಿಗೆ ಜನ್ಮ ಕೊಟ್ಟೆದ್ದೇವೆ ಎಂದು ನೋವುನ್ನು ನುಂಗುತ್ತಾರೆ. ವೃದ್ಧಾಪ್ಯದಲ್ಲಿ ತಂದೆ –ತಾಯಿಗಳು ಬಯಸುವುದೇ ಕೇವಲ ಆಶ್ರಯ, ಆರೈಕೆ, ಮಮತೆ, ನೆಮ್ಮದಿ, ಮುಂತದವುಗಳನ್ನು ಮಾತ್ರ ಬಯಸುತ್ತಾರೆ. ಆದರೆ ಪ್ರಸ್ತುತ ಸಮಾಜದಲ್ಲಿ ತಂದೆ – ತಾಯಿಗಳ ಯೋಗ ಕ್ಷೇಮ ಬಯಸುವ ಮಕ್ಕಳು ಸಾಕಷ್ಟು ಪ್ರಮಾಣದಲ್ಲಿ ಹೇರಳವಾಗಿಲ್ಲ ಮಕ್ಕಳು ಇದ್ದವರ ಪಾಡು ಇಷ್ಟೊಂದು ಗಂಬೀರತೆಯಿಂದ ಕೂಡಿರುತ್ತದೆಯೋ ಎನ್ನುವುದು ಪ್ರಶ್ನೆಯಾಗಿದೆ ಕಾಡತೊಡಗಿದೆ ಮಕ್ಕಳು ಇಲ್ಲದವರ ಪಾಡು ನಾಯಿ ಪಾಡಾಗಿರುವುದು ಮತ್ತು ಸಂತಾನ ಭಾಗ್ಯವಿಲ್ಲದವರ ಬಾಳು ತುಂಬಾ ಹೀನಾಯವಾಗಿರುತ್ತದೆ. ವಿವಾಹದಿಂದ ಸತಿಪತಿ ಜೊತೆಯಾಗಿ ಪ್ರಸ್ತುತವಗಿ ಜೀವನ ನಡೆಸುತ್ತಿದ್ದರು ಇವರಿಗೆ ಎಂದು ಮರೆಯಲಾರದಂತಹ ಮತ್ತು ಅದನ್ನು ಪಡೆಯಲಾರದಂತಹ ಒಂದು ಕೊರಗು ಸಂತಾನ ಭಾಗ್ಯವಿಲ್ಲದಿರುವುದು ಬಂಜೆಯ ಬಾಳಂತೂ ಬರಗಾಲದ ಭೀಕರತೆಯನ್ನು ತೋರಿಸುತ್ತದೆ. ಈ ಜೋಡಿ ವಯೋವೃದ್ದರಿಗೆ ಇದುವರೆಗೆ ಮಕ್ಕಳಿಲ್ಲದಿರುವುದು ಶೋಚನೀಯ ಬದುಕಾಗಿದೆ ಕೇವಲ ಪರರ ಮಕ್ಕಳ ಪ್ರೀತಿ ವಾತ್ಸಲ್ಯದಲ್ಲಿಯೇ ಕಾಲ ಕಳೆಯುತ್ತಿದ್ದಾರೆ. ದೈಹಿಕ ಶಕ್ತಿಯ ಸಾಮರ್ಥ್ಯವು ಕಳೆದುಕೊಂಡು ಇವರು ಈ ಗ್ರಾಮದ ಪ್ರಸಿದ್ದ ದೇವಸ್ಥಾನವಾದ ಬಸವೇಶ್ವರ ದೇವಾಲಯದಲ್ಲಿ ದೇವರ ಜಪ ಮತ್ತು ದೇವಸ್ಥಾನವನ್ನು ಶುಚಿಗೊಳಿಸುತ್ತ ದೇವರ ಪ್ರಸಾದವನ್ನು ಆಹಾರವನ್ನಾಗಿಸಿಕೊಂಡು ಜೀವನವನ್ನು ಸಾಗಿಸುತ್ತಿದ್ದಾರೆ. ಮಕ್ಕಳು ಬೇಕೆಂದವರಿಗೆ ದೇವರು ಕರುಣಿಸಲಿಲ್ಲ ಮಕ್ಕಳು ಬೇಡವೆಂದವರಿಗೆ ಸಂತಾನ ಭಾಗ್ಯ ದೊರೆಯುತ್ತದೆ. ಬಂಜೆಯ ಕುರಿತು ಜಾನಪದದವರು ಹೇಳಿರುವ ಮಾತೆಂದರೆ

" ಬಂಜೆ ಬೇನೆಯನರಿಯಳು ಮಲತಾಯಿ ಮದ್ದಬಲ್ಲಳೇ? ಹೊಟ್ಟೇಲಿ
ಸುತರಿಲ್ಲೇಂದೊದರಲು ಹುಟ್ಟುಬಂಜೆಗೆ ಫಲವಾದೀತೆ" ಸಲೆ ಬಂಜೆ
ಯಪ್ಪ ಸತಿ ನಿಜ ಸ್ವರೂಪ ಸಂಗದೊಳು ಫಲಕಾಲಮಿರ್ದೊಡೇನಿಲ್ಲದಿ
ರ್ದೊದ ಮೇನು ಫಲವಾದುದುಂಟೆ?" ಪತ್ತೆ ಬಲೆಯ ಆವಂದದಿಂ
ಬಂಜೆ ಬೇನೆಯ ಅರಿವಳೆ "ದತ್ತು ಪುತ್ರ ನಗೇತಕ್ಕೆ ಪಿತೃಭಕ್ತಿ"

ಎಂದು ಅಂದಿನ ಸಮಾಜದಲ್ಲಿ ಸೃಷ್ಟಿಸಿದನಾಡ ನುಡಿಗಳನ್ನು ಗಮನಿಸಬಹುದು ಈ ಕಾಲದಲ್ಲಿ ಮಹಿಳೆಯರು ಎಷ್ಟೇ ಉನ್ನತ ಸ್ಥಾನಮಾನಗಳನ್ನು ಪಡೆದಿದ್ದರೂ ಸಹ ಅವರು ಕೊನೆಯಲ್ಲಿ ಕೇವಲ ಒಂದು ಭೋಗದ ವಸ್ತುವಾಗಿಯೋ ಕಂಗೊಳಿಸುತ್ತಾರೆ. ಈ ಬಂಜೆಯ ವೃದ್ದರಿಗೆ ಕೊನೆಯಲ್ಲಿ ತಮ್ಮ ಜೀವನಕ್ಕೆ ಮುಕ್ತಿ ಕೊಡುವವರು ಇಲ್ಲದವರಾಗಿರುತ್ತಾರೆ. ಇವರು ಯಾವುದೇ ರೋಗ ರುಜಿನಿಗಳಿಗೆ ಬಲಿಯಾದರೆ ಅಥವಾ ಯಾವುದೇ ಖಾಯಿಲೆಗೆ ತುತ್ತಾದರೆ ಇವರನ್ನು ನೋಡಿಕೊಳ್ಳುವವರು ಯಾರು ತಮ್ಮ ಮುಪ್ಪಿನ ದಿನಗಳಲ್ಲಿ ಯಾರು ಆಶ್ರಯ ನೀಡುವವರು ಯಾರು ಎನ್ನುವ ಹಲವಾರು ಚಿಂತೆಗಳು ಇವರನ್ನು ಕಾಡುವ ಸಮಸ್ಯೆಗಳಾಗಿವೆ ಇಂತಹ ಅನೇಕ ಬಂಜೆ ವೃದ್ದರು ಭೂ–ಮಂಡಲದಲ್ಲಿ ಸಾಕಷ್ಟು ಸಿಗುತ್ತಾರೆ. ಇಂತಹವರಿಗೆ ಸಾಮಾಜಿಕ ಭದ್ರತೆಯನ್ನು ಒದಗಿಸುವುದಗೋಸ್ಕರ ಇವರಿಗೆ ಶಾಂತಿ, ನೆಮ್ಮದಿ,

ಮನದಲ್ಲಿರುವ ಚಿಂತೆಯನ್ನು ಮರೆಮಾಚುವುದಕ್ಕೆ ಇವರಿಗೆ ಸೂಕ್ತ ರಕ್ಷಣೆ, ಆಶ್ರಯದ ಅವಶ್ಯಕತೆಯಿರುತ್ತದೆ. ಇಂತಹ ವೃದ್ಧರನ್ನು ವೃದ್ಧಾಶ್ರಮಗಳಲ್ಲಿ ಇತರರೊಂದಿಗೆ ಸಹಬಾಳ್ವೆ ನಡೆಸುವಂತೆ ತಮ್ಮ ನೋವುನ್ನು ಮತ್ತೊಬ್ಬರೊಂದಿಗೆ ಹಂಚಿಕೊಳ್ಳಲು ಮತ್ತು ಆರ್ಥಿಕ ನೆರವು ನೀಡುವುದು ಸಮಾಜದ ಪ್ರತಿಯೊಬ್ಬರ ಕರ್ತವ್ಯವಾಗಿದೆ.

## ಸಂದರ್ಶನ 9

ಹೆಸರು : ಯಮುನಪ್ಪ ತಂದೆ ಶಿವಪ್ಪ (ಕುಷ್ಟರೋಗಕ್ಕೆ ಬಲಿಯಾದವರು)

ವಯಸ್ಸು : 71

ಊರು : ತೊಟ್ಲೂರು ತಾ॥ ಯಾದಗಿರಿ

ಹೆಂಡತಿ : ಶಾಂತಮ್ಮ( ಜೀವಂತವಾಗಿರುವುದಿಲ್ಲ)

ಮಕ್ಕಳು : 2ಗಂಡು + 2 ಹೆಣ್ಣು = 4

ದಿನಾಂಕ 18-07-2009 ರಂದು ಯಾದಗಿರಿ ತಾಲ್ಲೂಕಿನ ತೊಟ್ಲೂರು ಗ್ರಾಮಕ್ಕೆ ಶ್ರೀ ಯಮುನಪ್ಪ ತಂದೆ ಶಿವಪ್ಪನವರ ಮನೆಗೆ ಸಂದರ್ಶನಕ್ಕೆ ಭೇಟಿಯಾದಾಗ ಸಂದರ್ಶನ ಸಮಯದಲ್ಲಿ ಶ್ರೀ ಯಮುನಪ್ಪನವರು ಹೇಳಿರುವ ಮತ್ತು ಜೀವನದುದ್ದಕ್ಕೂ ಅನುಭವಿಸಿರುವ ನೋವಿನ ಸಂಗಾತಿಗಳನ್ನು ಎಳೆ ಎಳೆಯಾಗಿ ಬಿಚ್ಚಿಟ್ಟಿದ್ದಾರೆ. ಇವರು ತಮ್ಮ 25ನೆಯ ವಯಸ್ಸಿಗೆ ಶಾಂತಮ್ಮನೊಂದಿಗೆ ವಿವಾಹ ಮಾಡಿಕೊಂಡು ಸಂಸಾರವೆಂಬ ಸಾಗರದಲ್ಲಿ ಕಷ್ಟ ಸುಖ ಮತ್ತು ನೋವುನಲಿವುಗಳನ್ನು ಸಮನಾಗಿ ಸ್ವೀಕಾರಮಾಡಿ ಹೆಂಡತಿಯನ್ನು ಕಳೆದುಕೊಂಡ ನಾಲ್ಕು ಮಕ್ಕಳ ವಿವಾಹಮಾಡಿಕೊಟ್ಟು ವೃದ್ಧಾಪ್ಯದಲ್ಲಿ ಜೀವನವನ್ನು ಕೊಟ್ಟಿರುವಂತಹ ಹೆತ್ತಮಕ್ಕಳಿಗೆ ಮುಪ್ಪಿನಲ್ಲಿ ಬೇಡವಾದ ವ್ಯಕ್ತಿಯಾಗಿದ್ದಾರೆ. ಮಕ್ಕಳುಗಳಿಲ್ಲದೆ ಸಮಾಜಕ್ಕೆ ಭಾರವಾಗಿರವ ಮನೋಭಾವನೆಗೆ ಒಳಗಾಗಿರುತ್ತಾರೆ. ಅದಕ್ಕೆ ಕಾರಣ ಶ್ರೀ ಯಮುನಪ್ಪನವರು ಒಂದು ಕುಷ್ಟರೋಗಕ್ಕೆ ಬಲಿಯಾಗಿ ನರಳಾಡುತ್ತಿರುವುದು. ಈಗ ಇವರು ಸಾವಿನ ದವಡೆಯಲ್ಲಿರುವ ವ್ಯಕ್ತಿಯಾಗಿರುತ್ತಾರೆ ಸಮಾಜದಲ್ಲಿ ಬದುಕಬೇಕಾದರೆ ಸ್ಥಿತಿವಂತರಾಗಿರಬೇಕು,

ಆರೋಗ್ಯವಂತರಾಗಿರಬೇಕು ಅಂದರೆ ಮಾತ್ರ ಗೌರವದಿಂದ ಕಾಣುತ್ತದೆ ಯಾವುದೇ ಒಂದು ಅಂಗವಿಕಲತೆ ಹೊಂದಿದ್ದರು ಅವಹೇಳನದ ಮಾತುಗಳಿಗೆ ಗುರಿಯಾಗಬೇಕಾಗುತ್ತಿದೆ. ಯಾವುದೇ ಒಂದು ಅನಾರೋಗ್ಯಕ್ಕೆ ತುತ್ತಾದರೆ ನಿಂದನೆಗೆ ಗುರಿಯಾಗಬೇಕು ಇಂತಹ ಒಂದು ಕೆಟ್ಟ ಸಮಾಜದ ವ್ಯವಸ್ಥೆಯಲ್ಲಿ ಅನಾರೋಗ್ಯಕ್ಕೆ ತುತ್ತಾದ ವಯೋವೃದ್ದರ ಸ್ಥಿತಿ ದೇವರೆ ಗತಿಯೆಂದು ಸಾರಿ ಹೇಳುವಂತಾಗಿದೆ. ಶ್ರೀ ಯಮುನಪ್ಪ ಇವರಿಗೆ ಕುಟುಂಬದಲ್ಲಿ ಮಕ್ಕಳು ಸೊಸೆಯಂದಿರು ಕೀಳುಮಟ್ಟದಿಂದ ನೋಡಿಕೊಳ್ಳುವುದು ಮತ್ತು ಉಪಚರಿಸುವುದು ಒಂದೆಡೆಯಾದರೆ ಸಮಾಜದಲ್ಲಿ ಇವರನ್ನು ಮಾತಾನಾಡಿಸುವ ವ್ಯಕ್ತಿಗಳು ಇಲ್ಲದಿರುವುದು, ಸಾಂತ್ವಾನ ಹೇಳುವವರು ಸಹ ಕಂಡುಬರುತ್ತಿಲ್ಲ. ವೃದ್ದಾಪ್ಯದಲ್ಲಿ ಕೆಲವೊಂದು ರೋಗಗಳು ಮೃತ್ಯುವಿನ ಬಾಯಿಗೆ ನೂಕುತ್ತವೆ ಮೊದಲೇ ಬಡತನ, ಅನಕ್ಷರತೆ, ಅಂದಕಾರ, ಮೂಢನಂಬಿಕೆ ಮುಂತಾದವುಗಳು ಮೇಲೆ ನಂಬಿಕೆಯುಳ್ಳವರಾಗಿದ್ದು ಸರಿಯಾದ ಸಮಯಕ್ಕೆ ಯೋಗ್ಯರೀತಿಯ ಚಿಕಿತ್ಸೆ ದೊರೆಯದೆ ಮತ್ತು ರೋಗಕ್ಕೆ ತಗಲು ವೆಚ್ಚವನ್ನು ಭರಿಸಲಾಗದೆ ಮತ್ತು ನಗರ ಪ್ರದೇಶಕ್ಕೆ ಹೋಗಿಬರಲು ವಾಹನಗಳು ಇಲ್ಲದಿರುವುದರಿಂದ ಮತ್ತು ಸುಗುಮ ಸಂಚಾರಕ್ಕೆ ಯೋಗ್ಯ ರೀತಿಯ ರಸ್ತೆಗಳು ಇಲ್ಲದಿರುವುದರಿಂದ ಭಯಾನಕ ರೋಗಗಳಿಗೆ ಎಷ್ಟೊ ವೃದ್ದರು ಬಲಿಯಾಗಿದ್ದಾರೆ. ಕುಟುಂಬದಲ್ಲಿ ಶ್ರೀಯುತರಿಗೆ ಯಾರು ಮಾತನಾಡಿಸದೆ ಇಲ್ಲದಿರುವುದು ಒಂದಡೆಯಾದರೆ ಕೆಲವೆಡೆ ಹೀನ ದೃಷ್ಟಿಯಿಂದ ನೋಡುವ ಜನರು ಮತ್ತೊಂದೆಡೆ ಯಾಗಿರುತ್ತಾರೆ ಕುಷ್ಠರೋಗಕ್ಕೆ ತುತ್ತಾಗಿರುವ ವ್ಯಕ್ತಿಯೆಂದು ಹೀಯಾಳಿಸುತ್ತಾರೆ ಯಾರೊಬ್ಬರು ಮಾತಾನಾಡಿಸುವಷ್ಟು ಸೌಜನ್ಯ ಹೊಂದಿರುವುದಿಲ್ಲ. ಇವರನ್ನು ಒಂದು ಪ್ರತ್ಯೇಕ ಗುಡಿಸಲಲ್ಲಿ ಕೂಡಿಹಾಕಿರುತ್ತಾರೆ ಇವರಿಗೆ ಸ್ಥಾನಮಾಡಿಸುವವರು ಯಾರು ಇಲ್ಲ, ಸರಿಯಾದ ಸಮಯಕ್ಕೆ ಊಟ ತಿಂಡಿ ಕೊಡುವವರು ಮೊದಲೇ ಇರುವುದಿಲ್ಲ. ಅವರ ಬೇಡಿಕೆಗಳನ್ನು ವಿಚಾರಿಸುವವರಿಲ್ಲ ಅವರ ಮುಪ್ಪಿನ ದಿನಗಳ ಕೊನೆಕ್ಷಣಗಳಲ್ಲಿನ ಬಯಕೆ, ಆಸೆ, ಯಾವುದಾದರು ಇದೆಯೋ ಇಲ್ಲವೋ ಎಂದು ಕೇಳುವವರಿಲ್ಲ. ಕೇವಲ ಕುಷ್ಟ ರೋಗಕ್ಕೆ ಬಲಿಯಾದ ವೃದ್ಧ ಎಂದು ಅವಹೇಳನ ಮಾತುಗಳಿಂದ ನಿಂದನೆ ಮಾಡುವುದೊಂದೆ ಇವರ ಉದ್ಧೇಶವಿರುತ್ತದೆ. ಮಕ್ಕಳು ಸದಾ ಒಂದಲ್ಲ ಒಂದು ರೀತಿಯ ಕಾಯಕದಲ್ಲಿ ತೊಡಗಿರುತ್ತಾರೆ

ಮುಪ್ಪಿನಲ್ಲಿ ವೃದ್ಧರು ಕೆಲವೊಂದು ಚಟಗಳನ್ನು ಬೆಳಸಿಕೊಂಡಿರುತ್ತಾರೆ. ಉದಾ : ಬೀಡಿ ಸೇದುವುದು, ಎಲೆ ಅಡಿಕೆ ಅಗಿಯುವುದು, ಗಾಂಜ ಸೇದುವುದು, ಮಧ್ಯ ಪಾನ ಮಾಡುವುದು ಮುಂತಾದವುಗಳನ್ನು ಬೆಳೆಸಿಕೊಂಡಿರುತ್ತಾರೆ. ಇಂತಹ ಕೆಲವೊಂದು ಚಟಗಳಿಗೆ ಮಕ್ಕಳ ಹಣವನ್ನು ಕೊಡುವುದೇ ಇರುವುದರಿಂದ ವೃಧ್ಧರು ಸುಳ್ಳು ಹೇಳುವುದು, ಸಣ್ಣ ಹೇಳುವುದು, ಭಿಕ್ಷಾಟನೆ ಮಾಡುವುದು ಪ್ರವೃತಿಯನ್ನಾಗಿ ಮಾಡಿಕೊಂಡಿರುತ್ತಾರೆ ತಮ್ಮ ಮುಂದಿನ ದಿನಗಳನ್ನು ಲೆಕ್ಕ ಹಾಕಿಕೊಳ್ಳುತ್ತಾ ದಿನಗಳನ್ನು ಮುಂದೂಡುತ್ತಾರೆ. ಇಂತಹ ವಯೋವೃದ್ಧರ ಮಾನಸಿಕ ನೆಮ್ಮದಿಗಾಗಿ ಕೆಲವೊಂದು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗುವುದು ಗ್ರಾಮಂತರ ಪ್ರದೇಶದ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಎಲ್ಲಾ ರೀತಿಯಲ್ಲಿ ವೈದ್ಯಕೀಯ ಸೇವೆಯನ್ನು ಒದಗಿಸುವಂತೆ ಮಾಡಬೇಕಾಗುತ್ತದೆ. ಇದರಿಂದ ವೃದ್ಧರಿಗೆ ಯಾವುದೇ ಕ್ಷಣದಲ್ಲಿ ಯಾವುದಾದರು ಅನಾಹುತಗಳಿಗೆ ಬಲಿಯಾದರೆ ಶೀಘ್ರ ಗತಿಯಲ್ಲಿ ವೈದ್ಯಕೀಯ ಸೇವೆಯನ್ನು ಒದಗಿಸಬೇಕಾಗುವುದು ಹಾಗೂ ವೃದ್ಧರಿಗೆ ಎಲ್ಲಾ ರೀತಿಯ ವೈದ್ಯಕೀಯ ಸೌಲಭ್ಯಗಳನ್ನು ದೊರೆಯುವಂತೆ ಮಾಡುವುದು ಅವಶ್ಯಕವಾಗಿದೆ.

**ಗ್ರಾಮಂತರ ಪ್ರದೇಶಗಳಲ್ಲಿ ವೃದ್ಧರಿಗಾಗಿ ಮನೋರಂಜನಾ ಕಾರ್ಯಕ್ರಮಗಳು**

1. ಬೀದಿ ನಾಟಕಗಳು.
2. ಬಯಲಾಟಗಳು.
3. ಪೌರಾಣಿಕ ನಾಟಕಗಳು
4. ಜಾನಪದಗಳು
5. ಸಂಗೀತ ಕಾರ್ಯಕ್ರಮಗಳು
6. ಮನೋರಂಜನಾ ಕಾರ್ಯಕ್ರಮಗಳು ಹಾಗೂ ಮುಂತಾದವುಗಳು

**ವೃದ್ಧರಿಗಾಗಿ ವೈದ್ಯಕೀಯ ಸೇವೆಗಳು**

1. ಉಚಿತ ವೈದ್ಯಕೀಯ ಸೇವೆ
2. ವೈದ್ಯರ ಸಲಹೆಗಳು
3. ತುರ್ತು ವೈದ್ಯಕೀಯ ಸೇವೆ

4. ಗೃಹ ಸಂಪರ್ಕ ವೈದ್ಯಕೀಯ ಸೇವೆ

## ಸಂದರ್ಶನ – 10

ಹೆಸರು : ಯಂಕಮ್ಮ (ವಿಧವೆ, ಅಂಗವಿಕಲತೆ, ಕ್ಯಾನ್ಸರ್ ರೋಗಕ್ಕೆ ತುತ್ತಾಗಿದ್ದಾಳೆ)

ಗಂಡ : ದಿವಾಂಗತ ರಾಮಪ್ಪ

ವಯಸ್ಸು : 68

ಊರು : ಅರಿಕೇರಾ (ಕೆ)

ಮಕ್ಕಳು : ಮೂರು ಗಂಡು, ಒಂದು ಹೆಣ್ಣು ಒಟ್ಟು ನಾಲ್ಕು.

ದಿನಾಂಕ 20-07-2009 ರಂದು ಯಾದಗಿರಿ ತಾಲ್ಲೂಕಿನ ಅರಿಕೇರಾ (ಕೆ) ಗ್ರಾಮಕ್ಕೆ ಕ್ಷೇತ್ರ ಕಾರ್ಯಕ್ಕೆ ಹೋಗಿದ್ದಾಗ ಶ್ರೀಯುತ ಯಂಕಮ್ಮ ದಿವಾಂಗತ ರಾಮಪ್ಪ ರವರ ಮನೆಗೆ ಸಂದರ್ಶನಕ್ಕೆ ಒಳಪಡಿಸಲಾಗಿದ್ದು. ಸಂದರ್ಶನ ಸಮಯದಲ್ಲಿ ಶ್ರೀಯುತ ಯಂಕಮ್ಮರವರ ಮನದಾಳದ ಅನಸಿಕೆ ಮತ್ತು ನೋವಿನ ಸಂಗತಿಯನ್ನು ನಮ್ಮೊಂದಿಗೆ ಹಂಚಿಕೊಂಡಿರುತ್ತಾರೆ. ಪ್ರಸ್ತುತ ವೃದ್ಧಾಪ್ಯದಲ್ಲಿ ಅನುಭವಿಸಿದ ಮತ್ತು ಅನುಭವಿಸುತ್ತಿರುವ ವೇಧನೆಯ ಕ್ಷಣಗಳು ಮತ್ತು ನೆನಪುಗಳನ್ನು ಎಳೆ ಎಳೆಯಾಗಿ ಬಿಚ್ಚಿಟ್ಟಿದ್ದಾರೆ. ಶ್ರೀಯುತ ಯಂಕಮ್ಮನವರ ಪತಿಯು ಐದು ವರ್ಷಗಳ ಹಿಂದೆಯೆ ನಿಧಾನರಾಗಿದ್ದಾರೆ ಅಂದಿನಿಂದ ಶ್ರೀಯುತ ಯಂಕಮ್ಮನವರು ಒಂದಲ್ಲ ಒಂದು ರೀತಿಯ ಸಮಸ್ಯೆಗಳಿಗೆ ನೋವುಗಳಿಗೆ ಬಲಿಯಾಗಿದ್ದಾರೆ. ಪತಿಯ ಮರಣದ ಅಘಾತಕ್ಕೆ ಒಳಗಾಗಿ ಮಾರಕ ರೋಗವಾದ ಕ್ಯಾನ್ಸರ್ ರೋಗಕ್ಕೆ ಬಲಿಯಾಗಿದ್ದಾಳೆ ಇಂತಹ ಭಯಾನಕ ರೋಗಕ್ಕೆ ತುತ್ತಾಗಿದ್ದರು ಜೀವನವನ್ನು ಮುಂದೂಡುವ ಹಂಬಲವನ್ನು ವ್ಯಕ್ತ ಪಡಿಸಿದ್ದಾಳೆ. ಇವರಿಗೆ ಇನ್ನೊಂದು ಕಾಡುವ ಸಮಸ್ಯೆಯೆಂದರೆ ಅಂಗವಿಕಲತೆ ಇದು ಮರಣಕ್ಕೂ ಬಿಡದೆ ಬದಕವುದಕ್ಕೂ ಬಿಡದೆ ಜೀವನ ಸಾಗಿಸುವುದಕ್ಕೆ ಅಡ್ಡಿಯನ್ನುಂಟು ಮಾಡುತ್ತದೆ. ಇದರಿಂದ ಇವರು ಯಾವುದೇ ಕಾಯಕದಲ್ಲಿ ತೊಡಗಲು ಅಸಹಾಯಕ

ವಾಗಿರುತ್ತಾರೆ ಇವರಿಗೆ ಇನ್ನೊಂದು ಪ್ರಭಲ ಸಮಸ್ಯೆ ಪತಿಯು ಮರಣ ಹೊಂದಿರುವುದು ಆಸರೆ ಇರದ ಬಳ್ಳಿಯಂತೆ ಇದ್ದು ಜೀವನದ ಉದ್ದಕ್ಕೂ ಜತೆ ಜತೆಯಾಗಿ ಬಾಳಬೇಕಾದ ಇವಳ ಪತಿಯು ಇಹ ಲೋಕವನ್ನು ತ್ಯಜಿಸುವುದರಿಂದ ನಿತ್ಯ ಕಣ್ಣೀರಧಾರೆಯಲ್ಲಿ ಜೀವನ ನಡೆಸುವಂತಾಗಿದ್ದು ಜೀವನವನ್ನು ಬಡತನದಲ್ಲಿ ಕಳೆಯುತ್ತಿದ್ದಾರೆ. ಒಬ್ಬ ವ್ಯಕ್ತಿಗೆ ಪುರುಷರಿರಲಿ ಸ್ತ್ರಿಯರಿರಲಿ ಒಂದು ಸಮಸ್ಯೆಯನ್ನು ಎದುರಿಸಲು ಹಲವಾರು ವರ್ಷಗಳೇ ತಗಲುತ್ತವೆ ಆದರೆ ಇಲ್ಲಿ ಶ್ರೀಯುತರಿಗೆ ಒಂದರ ಮೇಲೊಂದು ಸಮಸ್ಯೆಗಳು ಎದುರಾಗಿವೆ, ಈ ಸಮಸ್ಯೆಗಳಿಂದ ಹೊರಬರಲು ಹರಸಹಾಸ ಮಾಡುತ್ತಿದಾಳೆ. ಇಂತಹ ಸಮಸ್ಯೆಗಳನ್ನು ಒಬ್ಬ ಮಹಿಳೆ ಎದುರಿಸಲು ಸಾಧ್ಯವೇ? ಎನ್ನುವುದು ಪ್ರಶ್ನೆಯಾಗಿದೆ ಇಂತ ಅನೇಕ ವಯೋವೃದ್ಧರು ತಮ್ಮ ವೃದ್ಧಾಪ್ಯದಲ್ಲಿ ಅನುಭವಿಸುವ ಕಷ್ಟವು ಒಂದೇ ಎರಡೇ! ಹೆಚ್ಚಿನ ಪ್ರಮಾಣದಲ್ಲಿ ವಯೋವೃದ್ಧರು ಕಷ್ಟಗಳ ಸರಮಾಲೆಯನ್ನೇ ಹಾಕಿಕೊಂಡವರು ಹೆಚ್ಚಾಗಿದ್ದಾರೆ. ವಿಧಾವ ವೃದ್ಧರಿಗೂ ಏನುಮಾಡಿದರು ಇವರ ಸಮಸ್ಯೆಗಳಿಗೆ ಪರಿಹಾರ ದೊರಕುತ್ತದೆಯೋ ಎಂಬುವುದೇ ಒಂದು ಸವಾಲಾಗಿದೆ. ಈ ವೃದ್ಧೆಯನ್ನು ಸಂದರ್ಶನಕ್ಕೆ ಒಳಪಡಿಸಿದಾಗ ಇವರು ಹೇಳುವ ಮಾಹಿತಿ ಕುಟುಂಬದಲ್ಲಿ ಮಕ್ಕಳು ಆರೈಕೆ ಮಾಡುತ್ತಿಲ್ಲದಿರುವುದು ಕಂಡು ಬರುತ್ತಿದೆ. ಆಶ್ರಯ ನೀಡದಿರುವುದು ಸಾಬೀತಾಗಿದೆ ಸಮಾಜದಲ್ಲಿ ಕೀಳು ದೃಷ್ಟಿಯಿಂದ ನೋಡವ ಜನರು ಆಶ್ರಯಕ್ಕೆ ಬಾರದೆ ಇರುವ ವ್ಯವಸ್ಥೆ ಸರಕಾರದ ವಿಧಾವ ವೇತನ ಮತ್ತು ವೃದ್ಧಾಪ್ಯ ವೇತನ ದೊರಕದೆ ಇರುವುದು ಮುಂತಾದ ಇವರನ್ನು ಕಿತ್ತು ತಿನ್ನುವ ಸಮಸ್ಯೆಯಾಗಿದೆ. ಕುಟುಂಬದಲ್ಲಿ ಈ ವಿಧಾವ ವೃದ್ಧೆಗೆ ಯಾರು ಕೇಳುವವರೇ ಇಲ್ಲದಿರುವುದು ಒಂದು ಸತ್ಯ ಸಂಗತಿಯಾಗಿದೆ ಇವರ ಬೇಡಿಕೆಗಳನ್ನು ಈಡೇರಿಸದಿರುವ ಮಕ್ಕಳು ಇದ್ದು ಇಲ್ಲದಂತಾಗಿದೆ. ಕುಟುಂಬದಲ್ಲಿ ಇವರನ್ನು ಒಂದು ಪ್ರತ್ಯೇಕಕೋಣೆಯಲ್ಲಿ ಕೂಡಿ ಹಾಕಿರುತ್ತಾರೆ ಮಕ್ಕಳು ಮತ್ತು ಮೊಮ್ಮಕ್ಕಳು ಸೊಸೆಯಂದಿರು ಇವರ ಹತ್ತಿರ ಸುಳಿಯುವುದೇ ಇಲ್ಲ ಇವರ ಮಕ್ಕಳು ಸದಾ ತಮ್ಮ ದಿನ ನಿತ್ಯದ ಕಾಯಕದಲ್ಲಿ ತೊಡಗಿರುತ್ತಾರೆ. ವೈದ್ಯಕೀಯ ವೆಚ್ಚವನ್ನು ಭರಿಸಲಾರದಂತಹ ಪರಿಸ್ಥಿತಿ ಬಂದಿರುತ್ತದೆ ಕ್ಯಾನ್ಸರ್‌ನಂತಹ ಕಾಯಿಲೆಗೆ ಪರಿಹಾರ ಹುಡುಕುವುದು ಒಂದು ಹುಚ್ಚುತನವಾಗಿದೆ ಇದನ್ನು

ಸುಲಭವಾಗಿ ಗುಣಪಡಿಸಲಾರದಂತಹ ಕಾಯಿಲೆ ಮತ್ತು ಹೆಚ್ಚು ಹಣವನ್ನು ಖರ್ಚು ಮಾಡಿಸುವಂತಹದ್ದು ಆರ್ಥಿಕ ಸಂಕಷ್ಟಕ್ಕೆ ಸಿಲುಕಿದ ಈ ವಿಧಾವ ವೃದ್ಧೆಗೆ ಯಾವುದೇ ಯೋಜನೆಗಳು ದೊರೆಯುವುದ ಶೋಚನೀಯ. ಇದರಿಂದ ಇವರು ಸಾವು ಯಾವಗಾದರು ಬರುತ್ತದೆಯೋ ಮತ್ತು ನನ್ನನ್ನು ಉಳಿಸಿಕೊಳ್ಳಲಾರದಂತಹ ಸಮಾಜದ ವ್ಯವಸ್ಥೆಗೆ ವೈದ್ಯಕೀಯ ಸೇವೆಗೆ ಬಹಿಷ್ಕಾರ ಹಾಕುತ್ತಾರೆ. ವೃದ್ಧಾಪ್ಯದಲ್ಲಿ ಯಾವುದೇ ಕಾಯಿಲೇಗಳಿಗೆ ತುತ್ತಾದರು ಸಮಾಜವು ಗೌರವದಿಂದ ಕಂಡರೆ ಇಂತವರಿಗೆ ಮಾನಸಿಕ ನೆಮ್ಮದಿಯನ್ನಾದರು ಕೊಡಬಹುದು ಇವರ ಮೂರು ಗಂಡು ಮಕ್ಕಳಲ್ಲಿ ಇಬ್ಬರು ಹೆಂಡತಿಯೊಂದಿಗೆ ಮಕ್ಕಳ ಸಮೇತ ಬೇರೆಯಾಗಿದ್ದಾರೆ ಇವರಿಗೆ ಮುಖ್ಯವಾಗಿ ಬೇಕಾಗಿರುವುದು ಸಮಾಜದಲ್ಲಿ ಗೌರವ ಸ್ಥಾನಮಾನ, ಆರೈಕೆ, ರಕ್ಷಣೆ ಮುಂತಾದುವುಗಳ ಅವಶ್ಯಕತೆ ಇರುತ್ತದೆ ಇವುಗಳನ್ನು ನೀಡುವವರು ಯಾರು ಎನ್ನುವುದು ಒಂದು ಪ್ರಶ್ನೆಯಾಗಿದೆ. ಶ್ರೀಯುತರು ಪತಿಯ ಅಗಲಿಕೆಯಿಂದ ನಿರಂತರವಾಗಿ ಸತತವಾಗಿ ಐದು ವರ್ಷಗಳ ವರೆಗೆ ಏಕಾಂಗಿಯಾಗಿ ಯಾವ ಮಕ್ಕಳ ಆಶ್ರಯವಿಲ್ಲದೆ ನೋವಿನಲ್ಲಿ ಬದುಕುತ್ತಿದ್ದಾರೆ ಇಂತಹ ಸಾಕಷ್ಟು ವಿಧಾವ ವಯೋವೃದ್ಧರು ಅಂಗವಿಕಲ ವಯೋವೃದ್ಧರು, ಮಾರಕ ರೋಗಗಳಿಗೆ ತುತ್ತಾದ ವಯೋವೃದ್ಧರು ಯಾದಗಿರಿ ತಾಲ್ಲೂಕಿನಾದ್ಯಾಂತ ಹೆಚ್ಚಿನ ಪ್ರಮಾಣದಲ್ಲಿ ಸಿಗುತ್ತಾರೆ. ಈಗಲಾದರು ಇಂತವರನ್ನು ಗುರುತಿಸಿ ಸಮಾಜದಲ್ಲಿ ಗೌರವ ಸ್ಥಾನಮಾನಗಳನ್ನು ನೀಡಿ ಮುಪ್ಪಿನಲ್ಲಿ ಆಶ್ರಯ ಮತ್ತು ರಕ್ಷಣೆಯನ್ನು ನೀಡಬೇಕಾಗುತ್ತದೆ. ಸಮಾಜದಲ್ಲಿರುವ ಪ್ರತಿಯೊಬ್ಬ ಪ್ರಜೆಯೂ ವಯೋವೃದ್ಧರ ಬಗ್ಗೆ ಅಲಕ್ಷ್ಯ ಮನೋಭಾವನೆ ತೋರದೆ ಕಾಳಜಿ ವಹಿಸಬೇಕಾಗುತ್ತದೆ ಸಂಘ ಸಂಸ್ಥೆಗಳಿಂದ ನೆರವು ದೊರೆಯುವಂತಾಗಬೇಕು, ಆಶ್ರಯವು ಸಿಗಬೇಕಾಗುವ ಅವಶ್ಯಕತೆ ಇದೆ. ಇದರಿಂದ ವಯೋವೃದ್ಧರ ಮುಂದಿನ ದಿನಗಳನ್ನು ಸುಖ, ಶಾಂತಿ, ನೆಮ್ಮದಿಯಿಂದ ಬಾಳಲು ಮುಕ್ತ ಅವಕಾಶ ಮಾಡಿಕೊಡಬೇಕಾಗುತ್ತದೆ ಎಂದು ಕ್ಷೇತ್ರ ಕಾರ್ಯದಿಂದ ತಿಳಿದು ಬಂದಿರುವ ಸತ್ಯಾಂಶವಾಗಿದೆ.

**"ಇಂದು ನೀವು ನಾಳೆ ನಾವು ಇದು ಎಲ್ಲರಿಗೂ"**

೫.೨

ಅನುಬಂಧ - ೧

## ಯಾದಗಿರಿ ತಾಲ್ಲೂಕಿನ ಪಿಂಚಣಿದಾರರು ಮತ್ತು ೬೦ ವರ್ಷಕ್ಕಿಂತ ಮೇಲ್ಪಟ್ಟ ವೃದ್ಧರ ವರದಿ

| ಯಾದಗಿರಿ | ಪಿಂಚಣಿದಾರರು | | ವೃದ್ಧಾಪ್ಯ ವೇತನ | | ಅಂಗವಿಕಲ ವೇತನ | | ಸಂಧ್ಯಾ ಸುರಕ್ಷಾ ಯೋಜನೆ | ಒಟ್ಟು | |
|---|---|---|---|---|---|---|---|---|---|
| | ಪುರುಷರು | ಮಹಿಳೆಯರು | ಪುರುಷರು | ಮಹಿಳೆಯರು | ಪುರುಷರು | ಮಹಿಳೆಯರು | ಮಹಿಳೆಯರು | ಪುರುಷರು | ಮಹಿಳೆಯರು |
| ನಗರ ಪ್ರದೇಶ | ೫೯೯ | ೩೮೮ | ೪೩೬ | ೧೧೫ | ೫೩ | ೨೦ | ೧೨೦ | ೧೦೮೮ | ೬೪೩ |
| ಗ್ರಾಮೀಣ ಪ್ರದೇಶ | ೧೫೩ | ೪೫ | ೧೨೦ | ೩೦ | ೨೪ | ೧೧ | ೯೫ | ೨೯೭ | ೧೮೧ |
| ಒಟ್ಟು | ೭೫೨ | ೪೩೩ | ೫೫೬ | ೧೪೫ | ೭೭ | ೩೧ | ೨೧೫ | ೧೩೮೫ | ೨೮೪ |

## ಅನುಬಂಧ – ೨

### ಯಾದಗಿರಿ ತಾಲ್ಲೂಕಿನ ಧರ್ಮವಾರು ಜನಸಂಖ್ಯೆ (ಗುಲಬರ್ಗಾ ಜಿಲ್ಲಾ ದರ್ಶನ ಗ್ಯಾಜೆಟಿಯರ್ ೨೦೦೧ ಜನಗಣತಿ ಪ್ರಕಾರ)

| ಪ್ರದೇಶ | ಹಿಂದೂ | ಮುಸ್ಲಿಂ | ಕ್ರೈಸ್ತ | ಜೈನ | ಬೌದ್ಧ | ಸಿಖ್ | ಇತರೆ | ಧರ್ಮ ಸೂಚಿಸದವರು |
|---|---|---|---|---|---|---|---|---|
| ನಗರ | ೩೭,೦೪೭ | ೧೯೧೦೧ | ೪೯೬ | ೫೩೩ | ೦೧ | ೦೯ | ೬೭ | ೬೬ |
| ಗ್ರಾಮೀಣ | ೧,೯೨,೯೨೫ | ೧೮,೧೬೫ | ೫,೨೭೪ | ೪೨ | -- | -- | ೦೨ | ೩೩೪ |
| ಒಟ್ಟು | ೨,೨೯,೯೭೨ | ೩೭,೫೬೬ | ೫,೭೭೦ | ೫೭೫ | ೦೧ | ೦೯ | ೬೯ | ೪೦೦ |

ಅನುಬಂಧ – ೩

## ಯಾದಗಿರಿ ತಾಲ್ಲೂಕಿನ ಸುತ್ತಮುತ್ತಲಿನ ಗ್ರಾಮಗಳಲ್ಲಿ ನಡೆಯುವ ಜಾತ್ರೆ, ಸೇರುವ ಜನಸಂಖ್ಯೆ, ತಿಂಗಳು ಮತ್ತು ದನಜಾತ್ರೆ ೨೦೦೧ರ ಮಾಹಿತಿ ಪ್ರಕಾರ ಪ್ರಕಟಿಸಿರುವ ಪಟ್ಟಿ

| ದೇವತೆ / ಸಂತರ ಹೆಸರು | ಜಾತ್ರೆ-ಉರುಸು ನಡೆಯುವ ಸ್ಥಳ | ಜಾತ್ರೆ-ಉರುಸು ನಡೆಯುವ ತಿಂಗಳು | ಜಾತ್ರೆಗೆ ಸೇರುವ ಅಂದಾಜು ಜನಸಂಖ್ಯೆ | ದನಗಳ ಜಾತ್ರೆ | ಯಾದಗಿರಿಯಿಂದ ಕಿ.ಮೀ ಅಂತರ |
|---|---|---|---|---|---|
| ಶಂಕರಲಿಂಗೇಶ್ವರ | ಇಡ್ಲೂರು | ಮಾಚ್ / ಏಪ್ರಿಲ್ | ೧೦ ಸಾವಿರ | ಇದೆ | ೧೮ ಕಿ.ಮೀ |
| ಮಶಮ್ಮ | ಬಳಿಚಕ್ರ | ಮೂರು ವರ್ಷಕ್ಕೊಮ್ಮೆ ನಡೆಯುತ್ತದೆ | ೧೫ ಸಾವಿರ | ಇಲ್ಲ | ೨೨ ಕಿ.ಮೀ |
| ಬಸಲಿಂಗಪ್ಪ | ಕೂಡ್ಲೂರು | ಶ್ರಾವಣ ಮಾಸ | ೧೫ ಸಾವಿರ | -॥- | ೨೦ ಕಿ.ಮೀ |
| ಮೌನೇಶ್ವರ | ಯಾದಗಿರಿ | ನವೆಂಬರ್ / ಡಿಸೆಂಬರ್ | ೫ ಸಾವಿರ | -॥- | --- |
| ಯಾಕೂಬ್ ಬುಕಾರಿ ಉರುಸ್ | ಯಾದಗಿರಿ | ಏಪ್ರಿಲ್ / ಮೇ | ೧೦ ಸಾವಿರ | -॥- | --- |
| ಬಂದಿಸಾಬ್ ಉರುಸ್ | ಯಡ್ಡಳ್ಳಿ | ಏಪ್ರಿಲ್ | ೫ ಸಾವಿರ | ಇದೆ | ೮ ಕಿ.ಮೀ |
| ಮೈಲಾರ ಲಿಂಗೇಶ್ವರ | ಮೈಲಾಪುರ | ಜನವರಿ | ೩ ಲಕ್ಷ | ಇಲ್ಲ | ೧೮ ಕಿ.ಮೀ |
| ವಿಶ್ವರಾಧ್ಯ | ಅಬ್ಬೇತುಮಕೂರ | ಆಗಷ್ಟ | ೫೦ ಸಾವಿರ | -॥- | ೧೨ ಕಿ.ಮೀ |
| ಬಸವೇಶ್ವರ | ಕಾಳಬೆಳಗುಂದಿ | ಮಾರ್ಚ್ | ೧೫ ಸಾವಿರ | -॥- | ೨೮ ಕಿ.ಮೀ |
| ವೆಂಕಟರಮಣ | ಅಲ್ಲಿಪುರ ತಾಂಡ | ಆಗಷ್ಟ | ೧೦ ಸಾವಿರ | -॥- | ೧೩ ಕಿ.ಮೀ |
| ಮಶಮ್ಮ | ಯಾದಗಿರಿ (ದುಕನ್‌ವಾಡಿ) | ಮೂರು ವರ್ಷಕ್ಕೊಮ್ಮೆ | ೭ ಸಾವಿರ | -॥- | --- |
| ರಾಚಯ್ಯ ಕಡ್ಲಪಯ್ಯ | ಗಾಜರ ಕೋಟ | ಮಾರ್ಚ್ / ಏಪ್ರಿಲ್ | ೧೦ ಸಾವಿರ | -॥- | ೨೫ ಕಿ.ಮೀ |
| ಸೇವಾಲಾಲ, ಮರಗಮ್ಮ | ಗೊಮುನಾಯ್ಕ ತಾಂಡ | ಮೇ | ೫ ಸಾವಿರ | -॥- | ೧೫ ಕಿ.ಮೀ |

# ಗ್ರಂಥಋಣ


1. ಭಾರತಿ ಹಾದಿಗೆ. – ಭಾರತೀಯ ಸಮಾಜ ಸಂರಚನೆ ಮತ್ತು ಬದಲಾವಣೆ. –ಪ್ರಕಾಶಕರು – ಲಕ್ಷ್ಮಿ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು. ವರ್ಷ –2005.
2. ಭೈರಪ್ಪ.ಕೆ. – ಪ್ರಸ್ತುತ ಸಾಮಾಜಿಕ ಸಮಸ್ಯೆಗಳು. – ಸಪ್ನ ಬುಕ್ ಹೌಸ್, ಬೆಂಗಳೂರು. ವರ್ಷ – 2004.
3. ಭೈರಪ್ಪ.ಕೆ. – ಭಾರತೀಯ ಸಮಾಜ. – ಪ್ರಕಾಶನ – ಪ್ರಕಾಶ ಸಾಹಿತ್ಯ, ಬೆಂಗಳೂರು. ವರ್ಷ –2004.
4. ಭೈರಪ್ಪ.ಕೆ. – ನಗರ ಸಮಾಜ – ಪ್ರಕಾಶನ –ಕೇಂಬ್ರಿಡ್ಜ್ ಪಬ್ಲಿಷಿಂಗ್ ಕಂಪನಿ, ಬೆಂಗಳೂರು 1998.
5. ಭೈರಪ್ಪ.ಕೆ. – ಭಾರತೀಯ ಸಮಾಜ ಸಂರಚನೆ ಮತ್ತು ಪರಿವರ್ತನೆ. – ಪ್ರಕಾಶನ –ಎಸ್.ಬಿ.ಎಸ್. ಪಬ್ಲಿಷರ್ಸ್, ಬೆಂಗಳೂರು. ವರ್ಷ –ಜುಲೈ 2005.
6. ಭೈರಪ್ಪ.ಕೆ. – ಭಾರತೀಯ ಸಮಾಜ ಪರಿಚಯ. – ಪ್ರಕಾಶನ – ಸಪ್ನ ಬುಕ್ ಹೌಸ್, ಬೆಂಗಳೂರು. ವರ್ಷ –ಮೇ 2004.
7. ಭೈರಪ್ಪ.ಕೆ. – ಭಾರತೀಯ ಸಮಾಜದ ಅಧ್ಯಯನ. – ಪ್ರಕಾಶನ –ಕೇಂಬ್ರೀಡ್ಜ್ ಪಬ್ಲಿಷಿಂಗ್ ಕಂಪನಿ. ಬೆಂಗಳೂರು. ವರ್ಷ –1996.
8. ಭೈರಪ್ಪ.ಕೆ. – ಭಾರತೀಯ ಸಮಾಜದ ಅಧ್ಯಯನ..– ಪ್ರಕಾಶನ – ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ. ಗುಲಬರ್ಗಾ. ವರ್ಷ –1997.
9. ರಮಾನಾಥ್.ಬಿ. – ಸಮಾಜಶಾಸ್ತ್ರ. – ಪ್ರಕಾಶನ –ಚೇತನ ಬುಕ್ ಹೌಸ್. ಮೈಸೂರು. ವರ್ಷ – 2004.
10. ರಂಗಸ್ವಾಮಿ ಬೆಳಕವಾಡಿ. – ಸಮಾಜಶಾಸ್ತ್ರದ ಮೂಲತತ್ವಗಳು. – ಪ್ರಕಾಶನ – ಪ್ರಕಾಶ ಸಾಹಿತ್ಯ. ಬೆಂಗಳೂರು. ವರ್ಷ –2004.
11. ರಾಜಶೇಖರ್.ಎಸ್. – ಭಾರತೀಯ ಸಮಾಜ ರಚನೆ ಮತ್ತು ಪರಿವರ್ತನೆ. – ಪ್ರಕಾಶನ – ಭ್ರಮರ ಪ್ರಕಾಶನ, ಶಿವಮೊಗ್ಗ. ವರ್ಷ –2005.



ಕುಟುಂಬ ಜೊತೆಗಿನ ವಯೋವೃದ್ಧ



ಸ್ವಯಂ ಉದ್ಯೋಗದಲ್ಲಿ ತೊಡಗಿರುವ ವೃದ್ಧ

